# ಗ್ರಂಥಗಳ ಮೂಲೋದ್ದೇಶ

## ನಾನು ತಿಳಕೊಂಡಿರುವದು

ಗ್ರಂಥವನ್ನು ಬರೆಯುವ ಕಾರ್ಯವು ಸಾಮಾನ್ಯವಲ್ಲವೆಂಬದು ನನಗೆ ಬಹು ಚೆನ್ನಾಗಿ ಗೊತ್ತು. ಗ್ರಂಥಿಯನ್ನು ಬಿಚ್ಚಿದ್ದು ಗ್ರಂಥವೇ ಅಲ್ಲವೆಂದು ನನ್ನ ಮತ. ಮತ್ತು ಗ್ರಂಥಿಯನ್ನು ಹುಡುಕಲಿಕ್ಕೆ ಹೋಗಬೇಕಾಗಿಯೇ ಇಲ್ಲ. ಅದು ಜೀವಿತದ ಒಂದು ಲಕ್ಷಣ. ಎಷ್ಟು ಸರಳವಾಗಿ ಜೀವಿತವನ್ನು ಸಾಗಿಸಬೇಕೆಂದಿದ್ದರೂ ಗಂಟು, ಸಿಕ್ಕು, ಅದರಲ್ಲಿ ತೋರಿಬರುವದೇನೂ ತಪ್ಪಿದ್ದಲ್ಲ. ದೇಶಕಾಲ ಸಂಸ್ಕೃತಿಗಳು ಬದಲಾದಂತೆ ಇವುಗಳ ರೂಪ ಸಮ್ಮಿಶ್ರತೆಗಳೂ ಬದಲಾಗುವವು, ಬಿಗಿಯಾಗುವವು. ಇವುಗಳನ್ನು ಬಿಚ್ಚದೆ ಮುಂದಕ್ಕೆ ಹೋಗಲಿಕ್ಕಾಗುವದಿಲ್ಲ. ಮುಂದಕ್ಕೆ ಹೋಗದೆ ಇದ್ದಂತೆಯೇ ಆಯುಷ್ಯವನ್ನು ಕಳೆಯುತ್ತಿದ್ದರೆ ಅದು ಮಾನವ್ಯದ ಲಕ್ಷಣವಲ್ಲ. ಯಾಕೆಂದರೆ ಅಷ್ಟೇನೋ ಪಶುಗಳಿಂದಲೂ ಸಹಜವಾಗಿಯೇ ನಡೆಸಲ್ಪಡುತ್ತದೆ—ಅಂದಮೇಲೆ ಮನುಷ್ಯನಿಗೆ ಅವುಗಳಿಗಿಲ್ಲದ ಬುದ್ಧಿಯೂ ಇದ್ದೇನುಪಯೋಗ?

ಪ್ರಾಣಿಗೆ ಇರುವ ತೊಡಕುಗಳು ಎರಡು ಎಂದು ಹೇಳಬಹುದು. (೧) ಜೀವಕ್ಕೆ (life) ಇರುವ ತೊಡಕುಗಳು—ಉಪಾಧಿಗಳು ಎಂದು ಇವಕ್ಕೆ ವೇದಾಂತವು ಕೊಟ್ಟ ಹೆಸರು. (೨) ಜೀವಿತದಲ್ಲಿರುವ (living) ತೊಡಕುಗಳು. ಮೊದಲನೆಯವು ವಿತರ್ಕಕ್ಕೆ ಗೋಚರವಾಗತಕ್ಕವು. ಚೈತನ್ಯದ ಮೂಲವನ್ನೇ ಕಂಡುಹಿಡಿಯಬೇಕೆಂಬ ಎಚ್ಚರವು ಹುಟ್ಟಿ ವಿವೇಚಿಸುತ್ತ ತಲ್ಲಣಿಸುವ ಮನಸ್ಸಿಗೆ ಅವು ಮುಖ್ಯವಾದ ವಿಷಯಗಳು. ಹುಟ್ಟು ಸಾವುಗಳೆಂದರೇನು, ಮನಸ್ಸು ಮತ್ತು ಅದರ ವೃತ್ತಿ ವ್ಯಾಪಾರಗಳೆಂದರೇನು, ಎಂಬ ಶೋಧವೇ ಅಂತಹ ಮನಸ್ಸಿನಲ್ಲಿ ನಡೆಯುತ್ತಿರುವ ಕೆಲಸ.

ಮನಸ್ಸಿನ ಕೆಲಸವೇ ಎಲ್ಲವೂ ಎಂಬ ಮನವರಿಕೆಯಾದಮೇಲೆ ಆ ಮನಸ್ಸನ್ನು ಅಧೀನಮಾಡಿಕೊಳ್ಳಲು ಯತ್ನಿಸುವದು, ಅಥವಾ ಅದರ ಸಕಲ ಉಪಾಧಿಗಳನ್ನೂ ಮೀರಿಹೋಗಲು ಯತ್ನಿಸುವದು, ಅಂತಹ ಜೀವಿಗಳ ಸಾಧನೆ. ಆದರೆ ಅಂತಹ ಜೀವಿಗಳು ಬಹಳ ಅಪರೂಪ. ಸಾವಿರ, ಲಕ್ಷ, ಅದೇಕೆ–ಕೋಟಿಯಲ್ಲಿ ಎಲ್ಲಿಯೋ ಒಬ್ಬರು. ಕಬೀರನು ಈ ವಿಷಯವಾಗಿ ಉತ್ತಮವಾದೊಂದು ಮಾತನ್ನು ಹೇಳಿದ್ದಾನೆ:—

> ' ಸಬ ಪರ ಸವಾರ ಮನ ಹೈ ಮನಕೆ ಟೇಕ ಅನೇಕ | '
> ಜೋ ನರ ಮನ ಪರ ಸವಾರ ಹೈ, ಲಾಖೊಂ ಮೆ ದೇಖ, ತೊ
> ಕರೋಡೊಂ ಮೆ ಏಕ ||

(ಎಲ್ಲದರಮೇಲೂ ಮನಸ್ಸೇ ಸಹಜವಾಗಿ ಸವಾರಿಯನ್ನು ಹಾಕಿದೆ. ಆದರೆ ಮನಸ್ಸಿನಮೇಲೆಯೇ ಸವಾರಿಯನ್ನು ಹಾಕಿ ಕೂತ ನರನನ್ನು ಕಾಣಬೇಕೆಂದಿದ್ದರೆ, ಎಷ್ಟೋ ಲಕ್ಷಗಳನ್ನು ಎಣಿಸುತ್ತ ಹೋದರೆ ಕೋಟಿಗಳ ಸಂಖ್ಯೆಗೆ ಮುಟ್ಟಿದಮೇಲೆ ಒಬ್ಬನೆಲ್ಲಿಯಾದರೂ ಕಂಡುಬರಬಹುದು.)

ಜೀವದ ಬುಡವನ್ನೇ ಕಂಡುಹಿಡಿಯಬೇಕೆಂಬ ಆಕಾಂಕ್ಷೆಯು ಅತ್ಯುಚ್ಚವಾಗಿದೆ ಎಂಬದಕ್ಕೆ ಸಂದೇಹವಿಲ್ಲ. ಅಂತಹ ಜ್ಞಾನವು ಉದಯಿಸುವವರೆಗೆ ಎಲ್ಲವೂ ಅಜ್ಞಾನವೇ ; ಮತ್ತು ಅಜ್ಞಾನವಿರುವವರೆಗೆ ಎಲ್ಲವೂ ಬಂಧನವೇ—ಎಂಬ ತಿಳುವಳಿಕೆಯನ್ನಿಟ್ಟುಕೊಂಡು ಬಿಡುಗಡೆಯನ್ನು ಹೊಂದುವಂತೆ ವರ್ತಿಸುವ ಮನುಷ್ಯನು ಧನ್ಯನೇ. ಆದರೆ ಆ ಸೂಕ್ಷ್ಮ ಬಂಧನಗಳನ್ನು ಹರಿದುಹಾಕುವವರು ಎಷ್ಟು ವಿರಳರೋ, ಹಾಗೆಯೇ ಅವನ್ನು ಹರಿಯುವ ಉಪಾಯಗಳೂ ಅಷ್ಟೇ ಕಷ್ಟ. ಅಂಥ ಮುಕ್ತಿಗೆ ಅನುಕೂಲವಾದ ವಿಚಾರ ಸಾಧನೆಗಳನ್ನು ತೋರಿಸಿಕೊಡುವ ಪುಸ್ತಕಗಳು ಜೀವಿತದ ಮೂಲ ಗ್ರಂಥಿಯನ್ನೇ ಹರಿಯುವವಾದುದರಿಂದ ಅವು ನಿಜವಾಗಿಯೂ ಗ್ರಂಥಗಳೇ.

## ಹಾಗಾದರೆ ಸಾಮಾನ್ಯರ ಗತಿಯೇನು ?

ಆ ಗ್ರಂಥಗಳ ಉಪಯೋಗವು ಕೋಟಿಗಳಲ್ಲೊಬ್ಬರಿಗೆ. ಸಾಮಾನ್ಯರಿಗೆ ಉಪನಿಷತ್ತುಗಳು, ದರ್ಶನ ಮುಂತಾದ ಸಂಕ್ಷೇಪಗಳು ಕೆಲಸಕ್ಕೆಬಾರದ

ವಸ್ತುಗಳು. ಇವರನ್ನು ಕಾಡಿಸುವ ಬಂಧನಗಳು ಬೇರೆ. ಜೀವಿಯ ಸಹಜ ಗುಣವಾಗಿರುವ ಆಹಾರ ನಿದ್ರಾ ಭಯ ಮೈಥುನಗಳಿಗೆ ತಕ್ಕ ವ್ಯವಸ್ಥೆಯೇ ಇವರಿಗೆ ಬೇಕಾದ್ದು. ವಾಸನಾತ್ಮಕ ಶರೀರಕ್ಕೆ ನೈಸರ್ಗಿಕವಾದ ಲಕ್ಷಣ ಗಳು ಎಂದರೆ ಇವೇ. ಜೀವಿತದ ಉತ್ಸಾಹವೂ ಹುರುಪೂ ಇವೇ. ಜೀವಿತದ ಬಾಧೆ ಮತ್ತು ಬಂಧನಗಳೂ ಇವುಗಳಿಂದಲೇ. ಆದರೆ ಅವುಗಳಿಂದಾಗುವ ಕಷ್ಟ ನಷ್ಟಗಳು ಕಂಡುಬಂದೊಡನೆಯೇ ಅವನ್ನು ಬಿಟ್ಟುಬಿಡಲಿಕ್ಕಾಗು ವದೋ? ಅವು ಪ್ರಕೃತಿಯೇ ಆಗಿ ಕೂತಿವೆ. ವಿವೇಕಕ್ಕೆ ಅವು ಉಪಾಧಿ ಗಳು, ಬಂಧನಗಳು, ಬಾಧೆಗಳು ಎಂದು ಕಂಡುಬಂದರೂ ಅದಕ್ಕೆ ಒಂದೇ ಟಿಗೆ ಪ್ರಕೃತಿಯನ್ನೇ ಜಯಿಸುವ ಶಕ್ತಿಯಿಲ್ಲ. ಅವು ಮನೆಮಾಡಿ ಯಾವಾ ಗಲೂ ಒಳಗೆ ಕೂತಿರುವಂತೆ ವಿವೇಕವು ಸದಾ ಕೂತಿರುವುದಿಲ್ಲ. ಸಾಮಾನ್ಯ ಜೀವಿಗಳಲ್ಲಿ ಕಷ್ಟವು ಹೋಗಿಬಿಟ್ಟಕೂಡಲೆ ವಿವೇಕವು ತಾನೂ ಹೊರಟು ಹೋಗುವದು. ವಿವೇಕವು ಪ್ರಕೃತಿಯನ್ನು ಜಯಿಸಬೇಕಾದರೆ ಅದು ಪ್ರಕೃತಿಯ ಮನೆಯನ್ನೇ ಸೇರಿಕೊಂಡು ಆಸನವನ್ನು ಜಮಾಯಿಸಬೇಕು. ಸಹಾಯಕ್ಕೆ **ಸತ್ಸಂಗವು ಬೇಕು, ಧ್ಯಾನವು ಬೇಕು, ಸಾಧನೆಯು ಬೇಕು.** ಇದು ಒಂದೆರಡು ದಿನಗಳ ಸಾಧನೆಯಲ್ಲ. ಜನ್ಮ ಜನ್ಮಾಂತರ ಗಳು ಬೇಕು ಸಿದ್ಧಿಗಾಗಿ. ಪ್ರಕೃತಿಯು ಸಹಜವಾಗಿಯೇ ತನ್ನ ಆಟವನ್ನು ಆಡಿಸುವಂತೆ **ವಿವೇಕವೂ ತನ್ನ ಆಟವನ್ನು ಆಡಿಸಬೇಕು.** ಆವಾ ಗಲೇ ಆತ್ಮ ವಿಕಾಸವು ಪ್ರಾರಂಭ. ಸಾರಾಂಶ - ವಿವೇಕವೂ ಅಭ್ಯಾಸವಾಗಿ, ಪ್ರಕೃತಿಯ ಗುಣಗಳು ಬಂಧನಗಳೂ ಉಪಾದಿಗಳೂ ಆಗಿವೆ ಎಂಬ ಸಂಪೂರ್ಣ ಪ್ರತ್ಯಯವು ಆಗುವವರೆಗೆ, ಆತ್ಮ ವಿಕಾಸದ ಮಾರ್ಗವು ಸಾಧ್ಯ ವಲ್ಲ. ಅಂತಹ ವಿವೇಕವು ಬೆಳೆಯಲಿಕ್ಕೆ ತಕ್ಕ ವಾತಾವರಣವೂ ಬೇಕು.

**ಇದಕ್ಕೆ ಧರ್ಮವೆಂದು ಹೆಸರು.**

ಉಪಾಧಿಗಳ ಪರಾಭವವಾಗುವವರೆಗೆ ಅವು ಇದ್ದುಕೊಂಡು ತಮ್ಮ ವ್ಯಾಪಾರವನ್ನು ನಡೆಸಿಯೇ ತೀರುವವು. ಅವುಗಳ ಸಹಜ ವ್ಯಾಪಾರಕ್ಕೆ ತಕ್ಕ ವ್ಯವಸ್ಥೆಯು ಇಲ್ಲವಾದರೆ, ಅವು ದುರ್ಧರವಾಗಿಯೂ ಅಪ್ರತಿಹತವಾಗಿಯ ೂ ಇರೋಣದರಿಂದ ತಮ್ಮ ವ್ಯಾಪಾರಗಳನ್ನು ಕುಟಿಲರೀತಿಯಿಂದ ನಡೆಸುವವು.

ಸಮಾಜವು ಇವುಗಳಿಗೆ ಸಂಬಂಧಪಟ್ಟ ಅನುಕೂಲತೆಯನ್ನು ಪ್ರತಿವ್ಯಕ್ತಿಗೂ ಕೊಡದೆಹೋದಲ್ಲಿ ಒಬ್ಬರ ಸುಖದಿಂದ ಅನೇಕರಿಗೆ ತೊಂದರೆಯಾಗಬಹುದು. ಅಥವಾ ವ್ಯಕ್ತಿಯು ಅಂಜುಪುರುಕನಾಗಿದ್ದರೆ ತನ್ನ ಪ್ರಕೃತಿಯ ಬಲವಾದ ವಾಸನೆಗಳನ್ನು ಅಸ್ವಸರ್ಗಿಕರೀತಿಯಿಂದ ಪೂರೈಸುವನು. ಅದರಲ್ಲಿಯೂ ಸಮಾಜದ ಆದರ್ಶಗಳು ದೊಡ್ಡವಾಗಿದ್ದು, ವ್ಯವಸ್ಥೆಗಳು ಮಾತ್ರ ಪ್ರಕೃತಿಗೆ ತಕ್ಕ ಸುಖಭೋಗಗಳನ್ನು ತಿರಸ್ಕರಿಸುವಂಥವಾಗಿದ್ದರೆ, ಅಂತಹ ಧರ್ಮವೆಂಬದು ಕಪಟ ಧರ್ಮವೇ ಆಗುವದು. ಅದರಲ್ಲಿರುವದು ಧರ್ಮದ ನಿರ್ಜೀವ ಧ್ವಜಮಾತ್ರವೇ ಅಲ್ಲದೆ ಧರ್ಮದ ಗುಣಕರ್ಮಗಳಲ್ಲ. **ಈ ವ್ಯವಸ್ಥೆಯಿಂದಲೇ ಸಾಮಾನ್ಯ ವ್ಯಕ್ತಿಯು ಮುಂದಕ್ಕೆ ಸಾಗತಕ್ಕದ್ದು.** ಸಮಾಜದಲ್ಲಿ ಪ್ರಕೃತಿಯ ಅನಾದರದಿಂದ ಕುಟಿಲತೆಗಳೇ ವಿಶೇಷವಾದರೆ ಅದರಂತೆಯೇ ಅದರಲ್ಲಿಯ ವ್ಯಕ್ತಿಗೂ ಧರ್ಮವಿಲ್ಲ. ಸಮಾಜವನ್ನೇ ತ್ಯಜಿಸುವ ವ್ಯಕ್ತಿಗೆ ಧೈರ್ಯವಿಲ್ಲ ಜ್ಞಾನವಿಲ್ಲ. ಇದು ಉಭಯಸಂಕಟವೇ. ಆದರೆ ಇದು ಯಾರಿಗೂ ತಪ್ಪಿದ್ದಲ್ಲ. ಅವ್ಯವಸ್ಥಿತ ಸಮಾಜದ ರೀತಿನೀತಿಗಳಿಗೆ ಇದಿರಾಗದೆ ಅದರ ಮರ್ಜಿ ಹಿಡಿಯುವವನು (ನೀಲಕಂಠಶಾಸ್ತ್ರಿಯಂತೆ) ಬೇಡವೆಂದರೂ ಕ್ರಮೇಣ ಮೋಸಗಾರನಾಗುತ್ತಾನೆ. ಅದನ್ನು ಬಿಟ್ಟು ಓಡಿಹೋಗುವವನು ಅಂದರೆ ಅಂಥ ವೈರಾಗ್ಯದ ಬರೇ ಸೋಗಿನವನು—ಯಾಕೆಂದರೆ ಹಾಗೆ ಓಡುವದು ಸಾಧ್ಯವೇಯಲ್ಲ–ಜ್ಞಾನಪ್ರೇರಿತನಲ್ಲವೇ ಅಲ್ಲ. ಹಾಳು ಸಮಾಜದಲ್ಲಿ ಬೆಳೆದವನಿಗೆ ಜ್ಞಾನವೆಲ್ಲಿಂದ ಒರಬೇಕು ? ಬೇವಿನ ಹಣ್ಣಿಗೆ ಮಾವಿನ ರುಚಿರೂಪಗಳೆಲ್ಲಿಂದ ಬರಬೇಕು ? ಮತ್ತು ಜ್ಞಾನವಿಲ್ಲದೆ ಬುಗುಲು ಬೇಸರಿಕೆಗಳಿಂದ ಕೈಲಾಗದೆ ವೈರಾಗಿಯಾಗಲು ಯತ್ನಿಸುವವನಿಗೆ ಯೋಗವೆಲ್ಲಿಂದ ಬರಬೇಕು ? (ಮೋಹನನಂತೆ) ನಿರ್ಭೀತನಾಗಿ ನಿರ್ದಾಕ್ಷಿಣ್ಯನಾಗಿ ಪ್ರಕೃತಿಯ ಆಗ್ರಹಕ್ಕೆ ಯೋಗ್ಯ ವ್ಯವಸ್ಥೆಗಳನ್ನು ಬಹು ಜನ ಹಿತದೃಷ್ಟಿಯಿಂದ ಮಾಡುವವನೇ ಧರ್ಮಾಭಿಮಾನಿಯು, ಸಂಘ ಹಿತೈಷಿಯು. **ಪ್ರವೃತ್ತಿಯ ಯೋಗ್ಯ ವ್ಯವಸ್ಥೆಯೇ ನಿವೃತ್ತಿಯ ನಿಜಸ್ಫೂರ್ತಿ** ಎಂಬದು ನಮ್ಮ ಪೂರ್ವಜರಿಗೆ ಚೆನ್ನಾಗಿ ಗೊತ್ತಿತ್ತು. ಆದುದರಿಂದಲೇ ಅವರು ಧರ್ಮದಲ್ಲಿ ಪ್ರವೃತ್ತಿಯ ವ್ಯವಸ್ಥೆಗೂ ದೊಡ್ಡ ಜಾಗವನ್ನು ಕೊಟ್ಟರು. ಅವರಿಂದೇರ್ಪಟ್ಟ ವರ್ಣಾಶ್ರಮ ಧರ್ಮದ ತತ್ತ್ವವೂ ಇದೇ

**ಪ್ರಕೃತಿಯು ಜ್ಞಾನ ಅದರ ಪ್ರವೃತ್ತಿಯು ವ್ಯವಸ್ಥೆ, ಇವೇ ನಿವೃತ್ತಿಯು ಹಾದಿ**. ವರ್ಣಾಶ್ರಮವು ಉಚ್ಚ ನೀಚ ಭಾವಗಳ ಲಾಂಪಟ್ಯವಲ್ಲ. ಜಾತಿ ಲಿಂಗ ಭೇದಗಳ ಗೊಂದಲವಲ್ಲ. ಬ್ರಾಹ್ಮಣ ಬ್ರಾಹ್ಮಣೇತರರ ಜಗಳಗಳ ಮೂಲವಲ್ಲ. ಪ್ರತಿಯೊಬ್ಬ ಮಾನವನಿಗೂ ಇಹಪರ ಸುಖಗಳೆರಡೂ ಲಭಿಸುವಂತೇರ್ಪಟ್ಟ ಧರ್ಮವೇ ವರ್ಣಾಶ್ರಮ, ಧರ್ಮ, ಮತ್ತು **ಗುಣಕರ್ಮಗಳೇ ಅದರ ತಿರುಳು, ಅಲ್ಲದೆ ಹುರುಳಿಲ್ಲದ ಜಾತಿ ಜನ್ಮಗಳಲ್ಲ.** ಪ್ರವೃತ್ತಿಯು ವ್ಯವಸ್ಥೆಯು. ಇಲ್ಲದೆ ಯಾವ ಧರ್ಮಕ್ಕೂ ಎಡೆಯಿಲ್ಲ. ಹಸಿವೆ ಮುಂತಾದವುಗಳು ಪ್ರಕೃತಿಯು ಆಗ್ರಹ. ಇವಕ್ಕೇ ಆಹಾರವಿಲ್ಲವಾದರೆ ಮನಸ್ಸಾದರೂ ಅವುಗಳ ಧ್ಯಾನವನ್ನು ಬಿಟ್ಟು ಕದಲುವದೆಂತು? ಅವುಗಳ ತೃಪ್ತಿಯಾಗಬೇಕು, ಅನಂತರವೇ ಮನಸ್ಸಿಗೆ ಇತರ ಉಚ್ಚ ವಿಷಯಗಳ ಆಲೋಚನೆಗೆ ಬಿಡುವು. 'ವಾತಾಂಬು ಪರ್ಣಾಶನ'ವನ್ನು ಮಾಡಿ ಯೋಗಿಗಳಿರುತ್ತಿದ್ದಿಲ್ಲವೇ ಎಂದು ಪುರಾಣಾಭಿಮಾನಿಗಳು ಕೇಳಬಹುದು. ಅಹುದು ಇದ್ದರು, ಆದರೆ ಅದು ಪುಸ್ತಕದಲ್ಲಿ ಮಾತ್ರವೇ—ಈಗ ಯಾರನ್ನಾದರೂ ತೋರಿಸಿಕೊಟ್ಟರೆ ಮತ್ತೆ ಆ ಹಾದಿಯನ್ನು ಕುರಿತು ಆಲೋಚಿಸ ಬಹುದಂತೆ, ಎಂದು ಅವರಿಗೂ ಉತ್ತರವನ್ನು ಕೊಟ್ಟರೆ, ಬಾಯಿ ಮುಚ್ಚಲೇ ಬೇಕಾಗುವದು. ನಮ್ಮ ತಿಳುವಳಿಕೆಗೆ ಬಂದಿರುವ ಋಷಿಗಳು ಎಂದರೆ ವಶಿಷ್ಠ ವಿಶ್ವಾಮಿತ್ರ ವ್ಯಾಸ ಪರಾಶರ ಮುಂತಾದ ಕೆಲವರು. **ಅವರಂತೆ ಈಗಿನವರು ಮಾಡಿದರೆ ಎಲ್ಲವೂ ವಿಪರೀತವಾಗಿಯೇ ಕಂಡುಬರುವುದು.** ಇನ್ನೂರು ಮಕ್ಕಳ ತಂದೆಯಾದ ವಶಿಷ್ಠರು ಕೆಲವರು ಈ ಕಾಲದಲ್ಲಿದ್ದರೆ ದೇಶಕ್ಕೆ ಕ್ಷಾಮವು ಬಾರದಂತೆ ಕೆಲವು ವಿಶ್ವಾಮಿತ್ರರೂ ಇರಬೇಕಾದೀತು! ವಿಶ್ವಾಮಿತ್ರರು ಇರಬೇಕಾದರೆ ದೇವಲೋಕದೊಡನೆ ಆ ಕಾಲದಲ್ಲಿದ್ದ ಸೂಕ್ಷ್ಮ ಸಂಸರ್ಗ ಸಂವ್ಯವಹಾರಗಳು ಇವೆಯೋ ಇಲ್ಲವೋ ಈ ಕಾಲದಲ್ಲಿ! ಇಲ್ಲವಾದರೆ ಇಂದ್ರನಿಗೆ ಖಾಬರಿಯಾದ ಕೂಡಲೆ ಮೇನಕೆಯನ್ನು ಇಲ್ಲಿಗೆ ಕಳಿಸಿಕೊಡುವದು ಅನನುಕೂಲ! ಮಾನಪ್ರಿಯನಾದ ಇಂದ್ರನಿಗೂ ಆ ಕಾಲದ ಹೊಟ್ಟೆಕಿಚ್ಚು ಇದೆಯೋ ಇಲ್ಲವೋ ಈಗ. ಯಾಕೆಂದರೆ ದುರ್ಗುಣ ಶಿಖಾಮಣಿಯನ್ನೂ ದೇವನೆಂದು ಮನ್ನಿಸುವವರು ಈ ಕಾಲದ 'ಧರ್ಮಲಂಡ ಯುವಕ ಯುವತಿಯರಲ್ಲಿ' ಕಡಿಮೆಯುಷ್ಟೆ? ತನ್ನನ್ನು ತಾನೇ ಸುಟ್ಟುಕೊಳ್ಳುವೆನೆಂದರೆ ಆತ್ಮ

ಹತ್ಯಕ್ಕೆ ಕಾನೂನಿನಲ್ಲಿ ತಕ್ಕ ಮಾನವಿಲ್ಲ. ಮತ್ತೆ ಪರಾಶರನಾಗಬೇಕಾದರೆ ಮತ್ಸ್ಯಗಂಧಿಯು ಬೇಕು. ಹೀಗೆ ಅಂತಹ ಋಷಿಗಳಾಗಲಿಕ್ಕೆ ಈವಾಗ ಕಷ್ಟಗಳು ಒಂದಲ್ಲ ಎರಡಲ್ಲ. ಇದನ್ನೇನೂ ಆ ಋಷಿಗಳ ನಿಂದೆಗಾಗಿ ಬರೆಯುವದಲ್ಲ. ಮಾತು ಮಾತಿಗೂ ಅವರ ಸುದ್ದಿಯನ್ನೆತ್ತಿ ಬುದ್ಧಿ ಹೇಳಲು ಯತ್ನಿಸುವವರಿಗಾಗಿ ಕೆಲವು ಸೂಚನೆಗಳಿವು. ಪ್ರವೃತ್ತಿಯು ಗಣನೆಗೆ ಯೋಗ್ಯವೆಂದಿಟ್ಟುಕೊಂಡಲ್ಲಿ ಅವರು ವಂದನೀಯರಾದರೂ ಕೆಲವು ರೀತಿಯಿಂದ ನಿಂದನೀಯರೂ ಆಗಿದ್ದರು ಎಂದು ಹೇಳಬಹುದು—ಎಂಬುದನ್ನು ಇಲ್ಲಿ ತೋರಿಸಬೇಕಾಗಿದೆ. **ಪ್ರವೃತ್ತಿಯ ಆಗ್ರಹಕ್ಕೆ ವಿಚಾರಯುತ ಮಾನವನ್ನು ಕೊಟ್ಟೇ ತೀರಬೇಕೆಂಬುದನ್ನು ತೋರಿಸಬೇಕಾಗಿದೆ.** ನಿವೃತ್ತಿಯ ಸೊಲ್ಲನ್ನೇ ಹಾಡಿಮಾಡಿ ನಡೆಯುತ್ತಿದ್ದ ಶಂಕರಾಚಾರ್ಯರು ಸಹ ಪ್ರವೃತ್ತಿಯ ವ್ಯವಸ್ಥೆಯಿಂದಲೇ ನಿವೃತ್ತಿಯೆಂಬುದನ್ನು ಮರೆಯಲಿಲ್ಲ. ತಮಗೆ ಅದು ಮಾಯೆ ಎಂದು ತೋರಿದರೂ ಅದನ್ನು ಜಯಿಸುವದೇ ಬಂಧವಿಮೋಚನವೆಂಬುದು ಗೊತ್ತಿದ್ದರೂ ಇತರರಿಗೆ ಅದು ಮಾಯೆಯೆಂಬ ನಿಜಪ್ರತ್ಯಯ ಇಲ್ಲವೆಂಬುದು ಚೆನ್ನಾಗಿ ಅವರಿಗೆ ತಿಳಿದಿತ್ತು. ದೇಹಕ್ಕೆ ಪ್ರವೃತ್ತಿಯು ತಪ್ಪಿದ್ದಲ್ಲವೆಂಬುದೂ ಚೆನ್ನಾಗಿ ಗೊತ್ತಿತ್ತು. ಅದಕ್ಕಾಗಿಯೇ ಅವರೂ 'ದಾರಿದ್ರ್ಯಸ್ಯ ಕ ಧರ್ಮ: ಕಚ ಭಜನ ವಿಧಿ: ಕಸ್ಥಿತಿ ಸಾಧು ಸಂಗೇ" ಎಂದು ಉದ್ಗಾರವನ್ನು ತೆಗೆದಿದ್ದಾರೆ. ದಾರಿದ್ರ್ಯದ ಪೀಡೆಯು ಇರುವತನಕ ಭಜನೆ ಸತ್ಸಂಗಗಳಿಗೆ ಅವಕಾಶವೇ ಇಲ್ಲವೆಂಬುದನ್ನು ಅವರು ಮರೆತಿರಲಿಲ್ಲ. **ಹೊಟ್ಟೆಗೆ ಅನ್ನದ ಹಸಿವು ತೀರಿದಮೇಲೆಯೇ ಬುದ್ಧಿಗೆ ಜ್ಞಾನದ ತೃಷೆಯು ಮೊದಲಾಗುವುದು.** ಆದುದರಿಂದ ದೇಹದ ಅವಶ್ಯಕತೆಗಳು ಮೊದಲು ಬೇಕು. ವೇದಾಂತ ಕೇಸರಿಯಾದ ವಿವೇಕಾನಂದನ ಉದ್ಗಾರವೂ ಇದೇ. ಮಹಾತ್ಮಾಗಾಂಧಿಯ ಮಾತು ಕೆಲಸಗಳೂ ಇದನ್ನವಲಂಬಿಸಿಕೊಂಡೇ ಇವೆ. ರಷ್ಯಾದಲ್ಲಿ ಲೆನಿನ್ ಮಾಡಿದ ಕೆಲಸದ ಉದ್ದೇಶವೂ ಅಂತಹದೇ. ಜಗತ್ತಿನ ಉತ್ಕ್ರಾಂತಿ ಪರಿವೃತ್ತಿಗಳ ತಿರುಳನ್ನು ಹೇಗೆಲ್ಲಿ ಪರಿಶೀಲಿಸಿದರೂ ಅದರಲ್ಲಿ ಪ್ರವೃತ್ತಿಯು ತನ್ನ ಸ್ವೈಸರ್ಗಿಕ ಹಕ್ಕನ್ನು ಬೇಡುವದರ ಮಹಾರವವು ಇದ್ದೇ ಇದೆ. **ಅದರ ನ್ಯಾಯವಾದ ಬೇಡಿಕೆಗೆ ಕಿವಿಯು ಎಲ್ಲೆಲ್ಲಿ ಕಿವುಡಾಗಿದೆಯೋ ಅಲ್ಲಿ ದುರಾಚಾರ**

**ಅನಾಚಾರಗಳು ನಡೆದು ಬರಬರುತ್ತ ಕೌಟಿಲ್ಯ ಯುದ್ಧ ಅನಾಹುತಗಳು ತಪ್ಪದೆ ನಡೆಯುವವು.** ಮನೆಯಲ್ಲಿ ಕಾರ್ಯತಃ ಭ್ರಷ್ಟಾಚಾರ ಹೊರಗೆ ಮಾತು ಕಥೆಗಳಲ್ಲ ಮಾತ್ರ ಪೂರ್ವಾಚಾರವನ್ನು ನಡೆಸುವವರಿಂದಲೇ ಲೋಕವು ಹಾಳಾಗುವುದು. ಎಲ್ಲ ಕಷ್ಟ ಪರಂಪರೆಗಳಿಗೂ ಈ ಅನುಕೂಲ್ಯಪ್ರಿಯ ದ್ವಂದ್ವಜೀವನವೇ ಮೂಲ. ಜೀವಿತದ ಏರಿಳಿಜಾರುಗಳನ್ನು ಇದ್ದಂತೆಯೇ ಧೈರ್ಯದಿಂದ ಕಂಡು ಹಿತದ ವ್ಯವಸ್ಥೆಗಳನ್ನು ಅಂದಿನವರೇ ಮಾಡಬೇಕು.

## ಪೂರ್ವಾಚಾರ ಪ್ರಿಯರ ದುರ್ದೈವ

ಪೂರ್ವಕಾಲವು ವರ್ತಮಾನವಲ್ಲ. ಆಗಿನ ಸ್ಥಿತಿಗತಿಗಳು ಈಗಿಲ್ಲ. ಆಗಿನ ಜನರು ಈಗಿಲ್ಲ. ಆಗಿನ ಅನ್ಯವಿಶ್ಲೇಷವಿಲ್ಲ, ಅಸಂಗವಿಲ್ಲ. ಇಲ್ಲೀಗಿರುವದು ಆಗಿದ್ದಂತೆ ಈ ಭೂಮಿಯಲ್ಲಿ ಮಾತ್ರವೇ ಹುಟ್ಟಿ ಬೆಳೆದ ಮತಗಳ ವಾದವಿವಾದಗಳ ಸಂಗತಿ ಮಾತ್ರವಲ್ಲ. ಭಾರತ ವರ್ಷವು ಸಕಲ ಜನಾಂಗ ಸಂಸ್ಕೃತಿಗಳ ಕೇಂದ್ರವಾಗಿದೆ. ವಿವಿಧ ಜನಾಂಗಗಳ ವಾಸಸ್ಥಾನವಾಗಿದೆ ಜಗತ್ತಿನ ಕಣ್ಣುಗೊಂಬೆಯಾಗಿದೆ. ಜಗತ್ತನ್ನು ಬಿಟ್ಟು ಅದಕ್ಕೆ ಬೇರೆ ಜೀವನವೇ ಇಲ್ಲ. ಭೌತಿಕ ವಿಜ್ಞಾನ, ಯಂತ್ರ ಉಪಕರಣಗಳಿಂದ ಪ್ರಯಾಣ ವೇಗವು ನಂಬಲಾರದಂತೆ ಹೆಚ್ಚಾಗಿ ಅಂತರವು ಕಡಿಮೆಯಾಗುತ್ತ ಬಂದಿದೆ. ಅದರಿಂದ ಭೂಗೋಲವೇ ಪುಟ್ಟ ಚಂಡಿನಂತೆ ಭಾವನೆಗೆ ತೋರುತ್ತದೆ. ಪಂಚಖಂಡಗಳೂ ಒಂದಕ್ಕೊಂದು ನೆರೆಹೊರೆಯಂತೆ ಆಗಿವೆ. ಕಾಲ ಅಂತರಾಲಗಳಮೇಲೆ ವಿಜ್ಞಾನವು ಪಡೆದ ವಿಜಯದ ಪರಿಣಾಮದಿಂದ, ಒಂದುಕಡೆ ಧನಮದಾಂಧರ ದುರಾಶೆಯಿಂದ ಯುದ್ಧಗಳಾಗುತ್ತಿದ್ದರೂ, ಇನ್ನೊಂದು ಕಡೆ ಇವರ ಸಂಖ್ಯೆಯನ್ನು ಬಹಳವಾಗಿ ಮೀರಿದ ನವಯುವಕ ಯುವತಿಯರಲ್ಲಿ ವಿಚಾರ ಪ್ರಸ್ಥಾನವು **ಐಕ್ಯಮುಖಿಯಾಗುತ್ತ**ಲಿದೆ. ಯುದ್ಧಮೂಲವಾದ ಬರೆಯ ದೇಶಾಭಿಮಾನವು ಸಮಸ್ತ ಪ್ರಪಂಚಾಭಿಮಾನವಾಗಿ ಮಾರ್ಪಡುತ್ತಿದೆ. ಪ್ರತಿಯೊಂದು ವಿಧವಾದ ದುರಭಿಮಾನವೂ ಭೇದವಿಲ್ಲದ ನ್ಯಾಯ ಮತ್ತು ಲೋಕಸಂಗ್ರಹಗಳಿಗೆ ಬಲಿಯಾಗಿ ಬೀಳುತ್ತಿದೆ. ವಿಜ್ಞಾನದ ಪರೀಕ್ಷಣ ಸಿದ್ಧಾಂತವು ಅಂಧಶ್ರದ್ಧೆಯನ್ನು ಪುಟಕ್ಕಿಟ್ಟಿದೆ, ಮಾತ್ರವೇ ಅಲ್ಲದೆ, ತನ್ನ ಸಿದ್ಧಾಂತದ ಅಗ್ನಿಯಲ್ಲಿ ತಾನೂ ಶುದ್ಧಿಯನ್ನು ಹೊಂದುತ್ತ,

ಆಧ್ಯಾತ್ಮ ತತ್ತ್ವದ ಕಡೆಗೆ ಸಹಜವಾಗಿ ಬಂದು ಮುಟ್ಟುತ್ತಿದೆ. ಇದೆಲ್ಲವನ್ನೂ ನೋಡಿದರೆ ನವಯುಗವು ಹುಟ್ಟಿದೆ, ಇಲ್ಲದಿದ್ದರೆ ಹುಟ್ಟುತ್ತಲಾದರೂ ಇದೆ ಎಂಬದಾಗಿ ತೋರುತ್ತದೆ. ಪೂರ್ವಕಾಲವು ಎಂದಿಗೂ ಹಿಂತಿರುಗಲಿಕ್ಕಿಲ್ಲ.

## ಹಾಗಿದ್ದರೆ ಕಾದಾಟವೇಕೆ?

ಅನಿವಾರ್ಯವಾಗಿ ಒಂದಾಗುತ್ತಿದ್ದೇವೆ. ಜಗತ್ತಿನ ವಯಾನುಭವಗಳು ಹಾಗೆ ಮಾಡುತ್ತಿವೆ. ಇತಿಹಾಸವು ಜಗತ್ತನ್ನೇ ಆ ಕಡೆಗೆ ತಿರುಗಿಸುತ್ತಿದೆ. ಸಹಸ್ರಾರು ವರ್ಷಗಳ ಕರ್ಮವಿಚಾರ ಫಲಭಾರದಿಂದ ಬಗ್ಗಿ ಹಬ್ಬಿದ ಕಾಲವೃಕ್ಷವು ತನ್ನ ನೆರಳಿನಲ್ಲಿ ಜಗತ್ತೆಲ್ಲವನ್ನೂ ತಂದಿಟ್ಟುಕೊಳ್ಳುತ್ತಿದೆ. ಆದರೆ ಮೂರ್ಖ ಮಾನವನೋ, ಇಂಥ ಸ್ಥಿತಿಗತಿಗಳೇ ಇಲ್ಲದ ಕಾಲದಲ್ಲಿ ಅನಿವಾರ್ಯವಾಗೇರ್ಪಟ್ಟ ರೀತಿನೀತಿಗಳನ್ನೇ ಈ ನವೀನ ಕಾಲಪರಿಸ್ಥಿತಿಗಳಿಗೂ ಒಡೆಯನಾಗಿ ನಿಯಮಿಸಲು ಹೆಣಗಾಡುತ್ತಿದ್ದಾನೆ. ಇದಕ್ಕೆ ಕಾಲಗತಿಯೇ ವಿರುದ್ಧವಾಗಿದೆ. ಅದರೊಡನೆ ನ್ಯಾಯವಾಗಿ ಸೇರಿಕೊಂಡು ನಡೆಯುವ ವಿಚಾರಶೀಲರ ಮನಸ್ಸೂ ವಿರುದ್ಧವಾಗಿದೆ. ಅಜ್ಞಾನದಿಂದಲೇ ಆಗಲಿ ಅಥವಾ ದುಷ್ಟ ಸ್ವಾರ್ಥದಿಂದಲೇ ಆಗಲಿ ಸಾರ್ವಜನಿಕ ದೃಷ್ಟಿಯನ್ನು ಮುಚ್ಚಿ, ತನ್ನ ಕಡೆಗೂ ತನ್ನ ಹಿಂದಿನ ಗತಿಯ ಕಡೆಗೂ ಮಾತ್ರ ನೋಡುವವರು ಕಾಲ ವೈರಿಗಳು; ಜಗತ್ತನ್ನು ಒಂದಾಗಿಸುವ ಶಕ್ತಿಯ ದ್ವೇಷಿಗಳು. ಕಾಲ ಪ್ರಭಾವವು ಹಿಂದೂದೇಶವನ್ನು ಜಗತ್ತಿನ ಲೀಲಾರಂಗವನ್ನಾಗಿ ಮಾಡುವಂತಿದೆ. ಭೂತಕಾಲವನ್ನೇ ಆಲೋಚಿಸುತ್ತ ಈ ಕಾಲದೊಡನೆ ಮೇಲವಿಲ್ಲದ ಸಂಪ್ರದಾಯಗಳನ್ನೂ ಲೋಕಸಂಗ್ರಹಕ್ಕೆ ವಿರುದ್ಧವಾದ ಸ್ವಾರ್ಥವನ್ನೂ ನಡೆಸುವವರು ಲೀಲಾರಂಗವನ್ನು ರಣರಂಗವನ್ನಾಗಮಾಡುತ್ತಾರೆ. ಅಂಥವರು ಪೌರ್ವಾತ್ಯರೇ ಆಗಲಿ ಪಾಶ್ಚಿಮಾತ್ಯರೇ ಆಗಲಿ ಲೋಕದ್ವೇಷಿಗಳೇ ಸರಿ.

## ಸರ್ವಸಮ್ಮತ ಧರ್ಮ

ಧರ್ಮದಲ್ಲಿ ಶಾಶ್ವತವಾದ ಜಗನ್ಮಾನ್ಯವಾದ ತತ್ತ್ವಗಳಿವೆ. ಇವುಗಳ ಸೌಲಭ್ಯಕ್ಕಾಗಿ ಆಯಾ ಪ್ರಾಂತ್ಯಗಳಲ್ಲಿ ಆಯಾ ಕಾಲಪರಿಸ್ಥಿತಿಗಳಿಗನುಸಾರ

ವಾಗಿ ಅನುಭವಗಳಿಂದೇರ್ಪಟ್ಟ ಕೆಲವು ಸೂತ್ರಗಳಿವೆ. **ಮೊದಲನೆಯವು ಗಣಿತದಂತೆ ಎಲ್ಲ ಕಾಲಗಳಲ್ಲಿಯೂ ಕಡೆಗಳಲ್ಲಿಯೂ ಒಂದೇ ಎರಡನೆಯವು ತಮ್ಮ ಜನ್ಮ ಸ್ಥಾನ ಕಾಲಗಳು ಮಾರ್ಪಟ್ಟೊಡನೆಯೇ ತಾವೂ ಬದಲುಗೊಳ್ಳುತ್ತವೆ.** ಇವನ್ನು ಇನ್ನೂ ನಡೆಸಬೇಕೆಂದು ಯತ್ನಿಸಿದರೆ ಹೊಸ ಕಾಲ ಪರಿಸ್ಥಿತಿಗಳೇ ದಂಗೆಯನ್ನೆಬ್ಬಿಸುತ್ತವೆ. ಆದರೆ ಅವುಗಳನ್ನೆಲ್ಲ ಬಿಡಬೇಕೋ? ಮೇಲೆ ಕೊಟ್ಟ ತತ್ತ್ವವು ಮನಸ್ಸಿಗೆ ಬಂದಲ್ಲಿ ಈ ಪ್ರಶ್ನೆಗೆ ಅವಕಾಶವೇ ಇಲ್ಲ. ಈಗಿನ ಸ್ಥಿತಿಗೂ ಅವಕ್ಕೂ ಹೊಂದಿಕೆಯಿದ್ದರೆ ಅವನ್ನು ಬಿಡುವದೇಕೆ? ಹೇಗಿದ್ದರೂ ತೌಟುವದೇನೋ ಅವಶ್ಯಕವೇ ಹಿಟ್ಟು ಹೊಟ್ಟುಗಳನ್ನು ವಿಂಗಡಿಸಬೇಕಾದರೆ. ಪ್ರಶ್ನೆಯು ಅವನ್ನು ಬಿಡುವದನ್ನು ಹಿಡಿಯುವದನ್ನು ಕುರಿತಲ್ಲ. ವರ್ತಮಾನವನ್ನು ಭೂತದ ಪ್ರತಿಯನ್ನಾಗಮಾಡಬೇಕೋ ? ಅದು ಸಾಧ್ಯವೋ ?—ಎಂಬುದೇ ಪ್ರಶ್ನೆ. ಯಾವ ವಿಚಾರಶೀಲನೇ ಆಗಲಿ ಪೂರ್ವವನ್ನೆಲ್ಲ ತೊಲಗಿಬಿಡುವದೇ ಈಗಿನ ಧರ್ಮವೆಂದು ಹೇಳಲಿಕ್ಕಿಲ್ಲ. ಆದರೂ ಅದನ್ನೇ ತೊಲಚಿ ತಿನ್ನುವದೊಂದೇ ಧರ್ಮವೆಂಬ ಮಾತಿಗೂ ಒಪ್ಪಲಿಕ್ಕಿಲ್ಲ. ಆದರೆ, ಬಹುಧಾನಕವಾದ ವಿಚಾರದಿಂದುದ್ಭವಿಸಿದ ಸಂಸ್ಕರಣಕ್ಕೆ ಎಲ್ಲೆಲ್ಲಿಯೂ ಪೂರ್ವಾಚಾರದ ಅಸಡ್ಡೆಯೇ ಇದ್ದರೆ **ನವಜೀವನದ ಹುರುಪು ಅದನ್ನು ಮೆಲ್ಲನೆ ತೆರೆಯುವದನ್ನು ಬಿಟ್ಟು ಜೋರಾಗಿ ಒಡೆದುಬಿಡುವದು. ಇಲ್ಲಿಯೇ ಅನಿವಾರ್ಯ ಉತ್ಕ್ರಾಂತಿಯ ಮೂಲವಿದೆ.**

ಜೀವಿಯಲ್ಲಿ ಸಮಯೋಗ ಶಕ್ತಿಯಿದೆ. ಇದು ಯಾವಾಗಲೂ ಪರಿಸ್ಥಿತಿಯೊಡನೆ ಬದಲಾಗುತ್ತ ಅದರೊಡನೆ ಮೇಲವಿಸಿಕೊಂಡಿದ್ದು ತನ್ನ ವಿಕಾಸವನ್ನು ಸಾಧಿಸುತ್ತದೆ. ಅದರ ಸಹಜಗತಿ ಸಮಾಯೋಗಗಳಿಗೆ ಅಡ್ಡಿಯಾಯಿತೋ ಪರಿಣಾಮವೂ ಕೆಡಲಿಕ್ಕೆ ಪ್ರಾರಂಭವಾಗದಿರದು. ಪ್ರವೃತ್ತಿಯ ಸಹಜ ಗತಿಯ ನಿರ್ಬಂಧದಿಂದ ಕ್ರೋಧವು ಉಂಟಾಗುವದು. ದುಷ್ಕೃತ್ಯಗಳುಂಟಾಗುವವು. ಈ ಚಿನ್ಹಗಳನ್ನು ಕಂಡಾದರೂ ಸಮಾಜವು ಕಣ್ದೆರೆದು ತೆಪ್ಪರಿಸಿಕೊಳ್ಳದೆಹೋದರೆ ಭಯಂಕರವಾದ, ಮುಂದೆ ಸುಧಾರಿಸಲಿಕ್ಕಸಾಧ್ಯವಾದ ಪರಿವೃತ್ತಿಯು ಪ್ರಾರಂಭವಾಗುವದು. ಅನಾಯಕ

ತ್ವವೂ ಪರಿಣಮಿಸಬಹುದು. ಸಾಮಾನ್ಯವಾಗಿ ನೋಡಿದರೆ **ವ್ಯಕ್ತಿಯ ಹಸಿವೆಯ ಅಗೌರವವೇ ಸಮಾಜದಲ್ಲಿ ಕಳ್ಳತನಕ್ಕೆ ಕಾರಣ. ಕಾಮವಾಸನೆಯ ಅಗೌರವವೇ ವ್ಯಭಿಚಾರಕ್ಕೆ ಮೂಲ.** ಸಮಾಜವು ಇದನ್ನು ಕಂಡುಹಿಡಿದು ಪ್ರತಿಯೊಂದು ವ್ಯಕ್ತಿಯ ಪ್ರವೃತ್ತಿಗೂ ಯೋಗ್ಯವಾದ ಗೌರವವನ್ನು ಕೊಟ್ಟು ಅದರ ಯೋಗ್ಯ ಭೋಗಕ್ಕೆ ತಕ್ಕ ವ್ಯವಸ್ಥೆಯನ್ನು ಮಾಡಬೇಕು. ಇದೇ ಅದರ ಮೊದಲನೆಯ ಧರ್ಮ.

ಇಷ್ಟೇ ಅಲ್ಲದೆ ಎಲ್ಲ ಧರ್ಮಗಳ ಮೂಲವೂ ಪ್ರಾರಂಭದಲ್ಲಿ ಜನಹಿತವೇ ಎಂಬದನ್ನು ಮರೆಯಬಾರದು. ಅದಕ್ಕೆ ಸಂಬಂಧಪಟ್ಟ ಸರ್ವಮಾನ್ಯ ಧೃತಿ ಕ್ಷಮಾ ದಮ ಅಸ್ತೇಯ ಶೌಚ ಇಂದ್ರಿಯನಿಗ್ರಹ ಮುಂತಾದ ಭಾಗಗಳನ್ನೇ ಪ್ರಧಾನವಾಗಿಟ್ಟುಕೊಳ್ಳಬೇಕೇ ಅಲ್ಲದೆ, ಕಣ್ಣಿಗೆ ಕಾಣದ ವಿಚಾರಕ್ಕೆ ತೋರದ ಊಹಾಪೋಹಗಳಲ್ಲಿ ಮಾತ್ರ ಕುರುಡು ನಂಬಿಕೆಯನ್ನಿಟ್ಟುಕೊಂಡು ಇತರರನ್ನು ಕಾಡಿಸಬಾರದು. ಯಾವ ಮತದವರೇ ಆಗಲಿ, ಆಸ್ತಿಕರಾಗಲಿ ನಾಸ್ತಿಕರೇ ಆಗಲಿ, ಬುದ್ಧಿಯುಳ್ಳವರಾದರೆ ಧರ್ಮದ ತಿರುಳಾದ ಈ ಗುಣವನ್ನು ಮನ್ನಿಸದಿರಲಾರರು. ಆದರೆ ನಮ್ಮ ದುರ್ದೈವ! ಹಿಂದುಗಳೂ ಮುಸಲ್ಮಾನರೂ ಕ್ರೈಸ್ತರೂ ಆ ಸರ್ವಸಮ್ಮತವಾದ ಮತ್ತು ಬುದ್ಧಿಗೆ ಬಹು ಯೋಗ್ಯವೆಂದು ತೋರುವ ಧರ್ಮಮೂಲವನ್ನು ಮರೆತು ತಮ್ಮ ಅಂಧಶ್ರದ್ಧೆಗಳಿಗೆ ಪ್ರಾಧಾನ್ಯವನ್ನು ಕೊಟ್ಟು ಬುದ್ಧಿಯನ್ನು ಬಗ್ಗು ಬಡಿದು ಜಗಳಗಂಟಿಗರಾಗಿದ್ದಾರೆ. ಪೂರ್ವಾಚಾರದವರ ಜಗಳಾಟದ ಮೂಲವು ಈ ಅಂಧಶ್ರದ್ಧೆಯೇ. ಹಿಂದೂ ಮುಹಮ್ಮದೀಯರ ದೊಂಬಿಗೂ ಇದೇ ಕಾರಣ. ವಿಚಾರವಿದ್ದಲ್ಲಿ ಈ ನೀಚ ಮನಸ್ತಾಪಗಳೂ ಜಗಳಗಳೂ ಎಂದೆಂದಿಗೂ ಬರಲಾರವು. ಆದರೆ ಯೌವನವು ವಿಚಾರಕ್ಕೆ ಕೊಡುತ್ತಿರುವ ಮಾನವನ್ನು ಪೂರ್ವಾಚಾರ ಪಕ್ಷದವರು ಕೊಡುವದಿಲ್ಲವೆಂಬದು, ಸ್ವಲ್ಪಹೊತ್ತು ಇಬ್ಬರ ವಾದವಿವಾದಗಳನ್ನೂ ವಿಮರ್ಶಿಸಿದ ಮಾತ್ರಕ್ಕೆ ಸ್ಪಷ್ಟವಾಗಿ ತಿಳಿಯುವದು.

## ಮಾನವನಿಗೆ ಅವಮಾನ

ಹಿಂದಿನವರು ಬರೆದಿಟ್ಟಂತೆ ಇಂದಿನವರು ಮಾಡಿಯೇ ತೀರಬೇಕೆಂಬುದು ಇಂದಿನ ಮಾನವ್ಯಕ್ಕೇ ಅವಮಾನ. ಇಂದಿನವರಿಗೆ ಮಿದುಳಿಲ್ಲವೋ?

ವಿಚಾರವಿಲ್ಲವೋ ? ಇಲ್ಲವೆಂದಿಟ್ಟುಕೊಂಡರೆ ಇಂದಿನ ಪೂರ್ವಾಚಾರದವರು ತಮ್ಮ ಜೀವನವೆಲ್ಲವನ್ನೂ ಹಿಂದಿನಂತೆಯೇ ಯಾಕೆ ನಡೆಸಬಾರದು ? ಆ ಕಾಲದ ಆಹಾರ ವ್ಯವಹಾರಗಳು, ಉಡಿಗೆ ತೊಡಿಗೆಗಳು, ವಿದ್ಯಾಭ್ಯಾಸ ಕ್ರಮಗಳು, ದೀಪ ಮತ್ತು ದೀವಟಿಗೆಗಳು, ವಾಹನಗಳು, ಪ್ರಯಾಣವಿಧಿಗಳು ಮುಂತಾದವುಗಳನ್ನೇ ಈಗಲೂ ಏಕೆ ಇಟ್ಟುಕೊಳ್ಳಬಾರದು ? ಅದಕ್ಕೆ 'ನಮ್ಮ ರಾಜ್ಯವಿಲ್ಲವಲ್ಲ' ಎಂದು ಅನೇಕರು ಹೇಳುವದುಂಟು. 'ನಿಮ್ಮ ಆಚಾರದಲ್ಲಿ ಅಷ್ಟು ಶಕ್ತಿಯು ಇದ್ದದ್ದೇಯಾದರೆ ರಾಜ್ಯವು ಹೋಯಿತೇಕೆ ? ಸರಿ-ಇರಲಿ. ರಾಜ್ಯವು ಬೇರೆಯಾದ್ದರಿಂದಲೋ ನಿಮ್ಮ ಆಚಾರಕ್ಕೆ ಅಡ್ಡಿ ? ಹಾಗಾದರೆ ಆ ರಾಜ್ಯಾಂಗದವರ ವಸ್ತ್ರ, ಉಡಿಗೆ ತೊಡಿಗೆ, ದೀಪ, ಯಂತ್ರ ಮುಂತಾದುವುಗಳೆಲ್ಲವನ್ನೂ ಬಾಯ್‌ಕಾಟ್ ಮಾಡಿ ಅವರು ತಾವಾಗಿಯೇ ಗಂಟುಕಟ್ಟಿ ಹೋಗುವರು. ನಿಮ್ಮ ಆಚಾರಕ್ಕೆ ಅನುಕೂಲವೇ ಆಗುವದು. ಹಾಗಾದರೆ ಕೃತಯುಗವನ್ನಲ್ಲವಾದರೆ ದ್ವಾಪರವನ್ನಾದರೂ ಮತ್ತೆ ಇಳಿಸಿ ಕಲಿಮಹಿಮೆಯನ್ನು ತಡೆಯಬಹುದಲ್ಲವೆ ?' ಆದರೆ ಅದಾಗದು. ತಮ್ಮ ಸಹಾಯಕ್ಕೆ ಆ ರಾಜಪಕ್ಷದವರೇ ಬೇಕು ! 'ಈಗಿನ ಹುಡುಗರಿಂದ ದೇಶ ಧರ್ಮಗಳು ಕೆಟ್ಟವು' ಅಂತೆ ! ಯುವಕರಿಗೂ ಧರ್ಮಾತ್ಮರ ಇತಿಹಾಸವು ಚೆನ್ನಾಗಿಯೇ ಗೊತ್ತಿದೆ. ನೂರಾರು ವರ್ಷಗಳಿಂದ ಪರದೇಶಿಯರ ಕೈಯಲ್ಲಿ ಜುಟ್ಟು ಕೊಟ್ಟ 'ರಾಮನಾಳಿದರೇನು ರಾವಣನಾಳಿದರೇನು' ಎಂಬ ಠಕ್ಕು ವೈರಾಗ್ಯದಿಂದ ಕೂತ ಧರ್ಮಾತ್ಮರ ಚರಿತ್ರೆಯು ಈಗಿನ 'ಧರ್ಮಲಂಡ'ರಿಗೂ ಗೊತ್ತು !

ಸುಮಾರು ಒಂದುಸಾವಿರ ಜನರೊಡನೆ ದಂಡೆತ್ತಿಬಂದ ಮಹಮುದ್ ಗಜ್ನವಿಯನ್ನು ಕಂಡು ಕೈಕಟ್ಟಿಕೊಂಡು ಕೂತ ಲಕ್ಷಗಟ್ಟಳೆಯ ಸೋಮನಾಥ ಭಕ್ತರಾದ ಹಿಂದುಗಳೂ ಪೂರ್ವಾಚಾರ ಶೀಲರೇ. ಪೃಥ್ವಿರಾಜನನ್ನು ಧ್ವಂಸಮಾಡುವದಕ್ಕಾಗಿ ಮಹಮ್ಮದ್ ಗೋರಿಗೆ ಸಹಾಯವನ್ನು ಮಾಡಿದ ಚಾಂದ್‌ಭಾಟನೂ ಆಚಾರಶೀಲನೇ ! ಸ್ವದೇಶಿಯರಿಗೆ ವಿರುದ್ಧವಾಗಿ ಇಲ್ಲಿಗೆ ಬಂದ ಪೋರ್ಚುಗೀಸ್, ಡಚ್, ಫ್ರೆಂಚ್, ಇಂಗ್ಲೀಷ್ ಜನರಿಗೆ ಒಳಗಿಂದೊಳಗೆ ಸಹಾಯವನ್ನಿತ್ತ ಭಾರತೀಯರಲ್ಲಿ ಯಾರೂ ಸ್ವಧರ್ಮ ದ್ವೇಷಿಗ

ಳಾಗಿಯಾಗಲಿ ಪೂರ್ವಾಚಾರ ವೈರಿಗಳಾಗಿಯಾಗಲಿ ಇರಲೇಇಲ್ಲ. ದೊಡ್ಡ ದೊಡ್ಡ ದೇವಾಲಯ ಮಜೀದಿಗಳನ್ನು ಕಟ್ಟಿಸಿದವರೆಷ್ಟೋ ಮಂದಿ ಇದ್ದಾರವರಲ್ಲಿ. ನಂದಕುಮಾರನು ಜಾತಿಕೆಟ್ಟವನಲ್ಲ, ಉಮಾಚಂದನೂ ಪೂರ್ವಾಚಾರ ವಿಮುಖನಲ್ಲ, ರಣಜೀತ್ ಸಿಂಹನೂ ಅಂಥವನಲ್ಲ., ಇವರಲ್ಲಿ ಯಾರೂ. 'ಪಾಶ್ಚಿಮಾತ್ಯ, ವಿದ್ಯೆಯಿಂದ' ಲಾಗಲಿ 'ಭೌತಿಕ ದೃಷ್ಟಿಯಿಂದ' ಲಾಗಲಿ 'ಐರೋಪ್ಯ ನಾಸ್ತಿಕತ್ವದಿಂದ'ಲಾಗಲಿ ಕೆಟ್ಟವರು ಇರಲಿಲ್ಲವಷ್ಟೆ ? ಆದರೂ 'ಈಗಿನ ಇಂದ್ರಿಯೋನ್ಮಾದಕ ಸಂಸ್ಕೃತಿ' ಯಿಂದ ದೂರವಾಗಿದ್ದ ಈ ಪೂರ್ವಾಚಾರಶೀಲರಿಂದಲೇ ನಮ್ಮಾ ದೇಶಕ್ಕೆ ದಾಸ್ಯವು ಉಂಟಾಯಿತು ! ಇವರಿಂದಲೇ ನಮ್ಮಾ ದೇಶವು ತೊಲಪುಗೊಂಡಿತು ! ಮತ್ತು ಈ ದೇಶವೊಂದನ್ನೇ ತಮ್ಮ ಧರ್ಮೋಪದೇಶದಂತೆ ಅವರೂ ಪುಣ್ಯಭೂಮಿಯೆಂದೇ ಭಾವಿಸುವದರಲ್ಲಿ ಏನೂ ಕಡಿಮೆಮಾಡಿರಲಿಕ್ಕಿಲ್ಲ ! ಇತಿಹಾಸವು ಯುವಕರಿಗೆ ಚೆನ್ನಾಗಿ ಗೊತ್ತಿದೆ ಸ್ವನಿರ್ಮಿತ ಧರ್ಮೋದ್ಧಾರಕರು ಪೂರ್ವಕಾಲದ ತೋಬರಿಯನ್ನು ಅವರ ಬಾಯಿಗೆ ಕಟ್ಟಿದ ಮಾತ್ರದಿಂದಲೇ ಅವರು ಅದಕ್ಕೆ ಬಾಯಿಹಾಕುವದೂ ಇಲ್ಲ, ಬಾಯಿ ಮುಚ್ಚುವದೂ ಇಲ್ಲ. ಬರಬರುತ್ತ ಕಟ್ಟಲಿಕ್ಕೂ ಬಿಡಲಿಕ್ಕಿಲ್ಲ. ಅವು ಹಿಂದಿನವಾಗಲಿ ಇಂದಿನವಾಗಲಿ– **ಆಚಾರ ವಿಚಾರಗಳೆಲ್ಲವೂ ಲೋಕ ಸಮಸ್ತಕ್ಕೂ ಹಿತಕಾರಿಯಾಗಬೇಕೆಂಬುದೇ ಯುವಜನರ ಉದ್ದೇಶ.** ಈ ಗಮ್ಯಕ್ಕೆ ಅಂಧಶ್ರದ್ಧೆಯು ಅನುಕೂಲವಾಗಲಾರದು.

## ಆದರೆ ಅದನ್ನು ಕಿತ್ತೊಗೆಯುವವರಾರು ?

ಸರಕಾರವೋ? ಅದಕ್ಕೆ ದೇಶದೊಳಗಣ ಒಡಕು ತೊಡಕುಗಳೇ ಅನುಕೂಲ. ಬರೆಯ ಬಾಯಾಡಿಗರೋ ? ರಾವ್‌ಬಹಾದುರ್ ಶಿವರಾಯನು ಸಂಘಸಂಸ್ಕರಣವನ್ನು ಕುರಿತು ಲೆಕ್ಚರ್ ಮಾತ್ರ ಕೊಡುವದರಲ್ಲಿ ಪ್ರವೀಣನೇ. ಆದರೆ ಅವನ ಗುಣವನ್ನು ಮಾತ್ರ ನೋಡಬಾರದು ! ಹೇಡಿಯಾಗಿರುವ ಪಂಡಿತನೋ ಮತ್ತೆ ? ನೀಲಕಂಠಶಾಸ್ತ್ರಿಗೆ ಅಧರ್ಮವೇನೆಂದು ಗೊತ್ತು. ಆತನು ಶಿವರಾಯನಂತೆ ಅನ್ಯಾಯವನ್ನು ಬೇಕೆಂದು ಮಾಡುವವನಲ್ಲ. ಆದರೂ ಅರಿತುಕೊಂಡೂ ತಲೆಯಮೇಲೆ ಕೈಯನ್ನಿಟ್ಟುಕೊಂಡವ

ನಾಗಿರುವನಾದುದರಿಂದ ಬೇಡವೆಂದರೂ ತಕ್ಕಿಗೆ ಸೊಪ್ಪು ಹಾಕುವದು ಅವನನ್ನು ಬಿಟ್ಟದ್ದೇ ಅಲ್ಲ. ಏತಕ್ಕೆ ? ಸಮಾಜದ ರೀತಿನೀತಿಗಳು ಅನ್ಯಾಯ ವೆಂದೂ ಕ್ರೂರವೆಂದೂ ಆತನಿಗೆ ಮನವರಿಕೆಯಾಗಿದ್ದರೂ ಆತನಿಗೆ ಅವ ನ್ನಿದಿರಿಸುವ ಧೈರ್ಯವಿಲ್ಲ. ಅವು ಆತನ ಮನಸ್ಸಿಗೆ ಮಾನ್ಯವಲ್ಲವೆಂದು ತೋರಿದರೂ ಆತನ ವರ್ತನಕ್ಕೆ ಮಾನ್ಯವೇ ಕೈಲಾಗದ ಮನುಷ್ಯ ಅವನ ಶಾಂತಿ ಎಲ್ಲಿದೆ ಮತ್ತೆ ? ಪ್ರಾರಬ್ಧ ಮಂತ್ರವನ್ನು ಜಪಿಸುವದರಲ್ಲಿ ! ಆತನ ಮಗಳು ವಿದ್ಯಾವತಿಯಾಗಿದ್ದರೂ ಅಪ್ಪನಂತೆಯೇ ಕೈಲಾಗದ ಪ್ರಾರಬ್ಧ ವಾದಿ. ಭಾರತೀಯ ಸಮಾಜದಲ್ಲಿ ಹೊತ್ತು ಬಂದಂತೆ ಛತ್ರಿಕೆಯನ್ನು ಹಿಡಿ ಯುವದೇ ಆಚರಣದಲ್ಲಿಡಬೇಕಾದ ಧರ್ಮವೆಂಬ ನಂಬಿಕೆಯುಳ್ಳವರೇ ಬಹ ಳ. ಗುಂಡೂರಾಯಸಂಥ ಪಶುಜೀವಿಗಳಿಗೂ ಕಡಿಮೆಯಿಲ್ಲ. ಅವರ ಪರೀಕ್ಷೆ ಯನ್ನು ಮಾಡಿ ಅವರ ಹಾಳುಮೋರೆಗೆ ಕನ್ನಡಿಯನ್ನು ತೋರಿಸುವ ಕುಮು ದೆಯರು ಮಾತ್ರ ಬೇಕು. ವರರಲ್ಲಿ ಎಷ್ಟುಮಂದಿ ಅಂಥವರು ಹೊರಡು ತ್ತಾರೋ ಮತ್ತೆ ! ಆದರ್ಶವೊಂದು ಆಚರಣವು ಇನ್ನೊಂದು ಆಗಿ ಇಂತಹ ಸ್ವಪರವಂಚಕ ಜೀವನವನ್ನು ಸಹಜವೇ ಎಂದಿಟ್ಟುಕೊಂಡು ಜೀವಯಾತ್ರೆ ಯನ್ನು ಸಾಗಿಸುವ ದೊಡ್ಡಮನುಷ್ಯರಾದ ಶಿವರಾಯರೂ, (ಅವರ ಅಕ ಸ್ಮಾತ್ತಾದ ಪರೀಕ್ಷೆಗಳ ಅಂತಸ್ತು ಯೂನಿವರ್ಸಿಟಿ ಸರ್ಟಿಫಿಕೇಟುಗಳು ಮಾತ್ರ ಅಲಭ್ಯವಾಗಿರೋಣದರಿಂದ) ಚಿಲ್ಲರೆ ದರ್ಜೆಯಲ್ಲಿರುವ ಸುಬ್ಬಣ್ಣಾ ಚಾರ್ಯರೂ ಎಷ್ಟು ಮಂದಿಯೋ ನಮ್ಮ ಸಮಾಜದಲ್ಲಿ ! ಹೊಟ್ಟೆಹೊರ ಕೊಂಡು ಹೆಂಗಸರ ಹಣಕ್ಕಾಗಿ ತಿರುಗುವ ಗುಂಡೂರಾಯರೆಷ್ಟು ಮಂ ದಿಯೋ! ಆದರೆ ಅನಿವಾರ್ಯವೆಂದು ಪ್ರಪಂಚದಂತೆಯೇ ನಡೆದುಕೊಂಡರೂ ಭೀತಿಯಿಂದ ತಾನುಮಾಡುವದು ಅನ್ಯಾಯವಲ್ಲವೇ? ಎಂದು ಕಳವಳಪಡುವ ನೀಲಕಂಠಶಾಸ್ತ್ರಿಗಳೂ ರಮೇಶರೂ ಹಲಕೆಲವರು ಇನ್ನೂ ಇದ್ದಾರೆ ಸುದೈ ವವಶಾತ್ ನಮ್ಮಲ್ಲಿ. **ಅಂಥವರೂ ಹೊರಟು ಹೋದರೆ ಈಗ ದೋ ಗ್ಯಾಡುವ ಸಂಘಕ್ಕೆ ನಾಳೆ ತೆವಳುವದೇ ಸದ್ಗತಿ ಯೆಂದರೆ !**

ಆದರೆ ಮೋಡದಲ್ಲಿ ಮಿಂಚೂ ಇದೆ. **ಮೋಹನನು** ಇದ್ದಾನೆ. ಅವ ನಂಥವರು ಹಲಕೆಲವರಿದ್ದಾರೆ. ಬರೆಯ ಪರೀಕ್ಷೆಗಳಲ್ಲಿ ಮಾತ್ರ ತೇರ್ಗಡೆ

ಹೊಂದಿ ಸಂಸ್ಕರಣ ಪ್ರಿಯರೆಂದೆನ್ನಿಸುವ ಅಂಜುಪುರುಕ ರಮೇಶರಿಗೂ ಮೋಹನನ ಹಾದಿಯು ಆಕರ್ಷಕವಾಗುತ್ತಿದೆ. ಮೋಹನನ ಪ್ರೇಮವಿಚಾರಗಳ ಆಯುಧವು ಸುದರ್ಶನದಂತೆ ಸಮಾಜದಲ್ಲೆಲ್ಲ ತಿರುಗುತ್ತಿದೆ. ಆದರೆ ರಮೇಶನಂತೆ ಆತನನ್ನವಲಂಬಿಸುವದರಲ್ಲಿ ಸ್ವಾರಸ್ಯವಿಲ್ಲ. ತೇಲುಗಣ್ಣಿನ ರಮೇಶರು ಕುರುಡರಿಗಿಂತಲೂ ಮೇಲಾಗಿರಬಹುದು, ಆದರೆ ಸಮಾಜಕ್ಕೇನೂ ಭೂಷಣಪ್ರಾಯರಲ್ಲ. ರಮೆಯೂ ಅಲಂಕಾರ ಪ್ರಾಯಳಲ್ಲ. ಒಳ್ಳೆಯವರಾದರೂ ಏನಾಯಿತು—**ಸಮಾಜಕ್ಕೆ ನವಜೀವನದ ಜಾತರಲ್ಲ, ಜನಕರೇ ಬೇಕಾದ ಆದರ್ಶ ಮೂರ್ತಿಗಳು; ಆಶ್ರಿತರಲ್ಲ ಬೇಕಾದ್ದು; ಆಧಾರಗಳು, ನವಜೀವನದ ಮಾದರಿಗಳು, ನಿಜಧರ್ಮದ ಮೂರ್ತಿಗಳು ಬೇಕೀಗ ಸಮಾಜದ ಉದ್ಧಾರಕ್ಕಾಗಿ.** ಆಡಿದ್ದನ್ನು ಮಾಡಿತೋರಿಸುವ ಮೋಹನನು ಬೇಕು. ವಿಚಾರಶೀಲನೂ ಆಚಾರಧೀರನೂ ಆದ ಮೋಹನನು ಬೇಕು. ಕುಮುದೆಯು ಬೇಕು. ಆವಾಗಲೇ ಈಗ ತೀಡುತ್ತ ಹೋಗುವ ಸಮಾಜವು ಮತ್ತೆ ತೇರುತ್ತ ಹೋಗುವದು.

## ಎರಡನೆ ದರ್ಜೆಯ ಗ್ರಂಥ.

ಉತ್ತಮ ಗ್ರಂಥವೆಂದರೇನೆಂಬದನ್ನು ಪ್ರಾರಂಭದಲ್ಲಿಯೇ ಹೇಳಿದ್ದೇನೆ. ಸೂಕ್ಷ್ಮವಾದ ಮೂಲಬಂಧನಗಳನ್ನೂ ಅವುಗಳನ್ನು ಹರಿಯುವ ರೀತಿಯನ್ನೂ ಅವುತೋರಿಸುವಂಥವು-ಎಂದು ಇನ್ನೊಮ್ಮೆ ಹೇಳಿದರೆ ಹೆಚ್ಚಾಗಲಿಕ್ಕಿಲ್ಲ. ಆದರೆ ಪ್ರವೃತ್ತಿಯ ವ್ಯಾಪಾರಗಳನ್ನೂ ಅವುಗಳನ್ನು ಅನಾದರಿಸಿ ಅವ್ಯವಸ್ಥೆಯಿಂದಿಡೋಣದರಿಂದಾಗುವ ಕೌಟಿಲ್ಯ ಅನಾಹುತಗಳನ್ನೂ ತೋರಿಸುವದು ಅವಶ್ಯಕವಾಗಿದೆ. ಯಾಕಂದರೆ ಪ್ರವೃತ್ತಿಯ ವ್ಯವಸ್ಥೆಯೇ ಸನಾತನಧರ್ಮ ಮೂಲವಾಗಿರುವ ನಿವೃತ್ತಿಯ ಅಡಿಗಲ್ಲು ಎಂದು ಮೊದಲೇ ಹೇಳಿದೆಯಷ್ಟೆ. **ಜೀವಿಯು ಆ ಗಮ್ಯದಕಡೆಗೆ ಲಕ್ಷ್ಯವನ್ನು ಕೊಡಬೇಕಾದರೆ ಸಂಘಜೀವನದ ಅವ್ಯವಸ್ಥೆಗಳನ್ನೂ ನಿವೃತ್ತಿತತ್ತ್ವಾನುಗುಣದಂತೆ ಅವುಗಳ ವ್ಯವಸ್ಥೆಯ ಸೂಚನೆಯನ್ನೂ ತೋರಿಸುವ ಕೆಲಸವು ಮುಖ್ಯವಾಗಿ ಕಲಾಪ್ರಪಂಚಕ್ಕೆ, ಅದರ**

**ಲ್ಲಿಯೂ ನಾಟಕಕ್ಕೆ ಸೇರಿದ್ದಾಗಿದೆ.** ಬರೆಯು ಅಭ್ಯಾಸದಿಂದ ಸಹಜವೇ ಎಂದು ಸಾಮಾನ್ಯರಿಗೆ ತೋರುವ ದುಷ್ಟರೂಢಿಗಳನ್ನು ಪ್ರೇಕ್ಷಕರ ಇದಿರಿನಲ್ಲಿ ಆಡಿಸಿ ತೋರಿಸಿ ಅವುಗಳನ್ನು ಕುರಿತು ಅವರನ್ನೇ ವಿವೇಚಿಸಿ ತೀರ್ಮಾನಿಸುವಂತೆ ಇಂಪುಸೊಂಪಾಗಿ ಒತ್ತಾಯಪಡಿಸುವದು ನಾಟಕದ ಕರ್ತವ್ಯವೇ. ಆದರೆ ನಾಟಕವೂ ಅಜ್ಜನೆಟ್ಟ ಆಲದ ಮರಕ್ಕೇ ನೀರನ್ನು ಸುರಿಯುತ್ತ ಹೋಗುವದಾದರೆ ಆ ನಾಟಕದಿಂದಾಗುವದು ಉಪದೇಶವಲ್ಲ, ಉನ್ಮಾದ. ತನ್ನ ಧ್ಯೇಯ ಕರ್ತವ್ಯಗಳನ್ನು ಪೂರೈಸುವ ನಾಟಕವೂ ಗ್ರಂಥವೇ.

## ಕನ್ನಡ ಮಾತುಬರೆಹ.

ಹೆಚ್ಚಾಗಿ ದಕ್ಷಿಣದೇಶದ ಭಾಷೆಗಳನ್ನು ಆಡಿದಂತೆಯೇ ಬರೆಯುವದಿಲ್ಲ. ಆಡುವದೊಂದು ರೀತಿಯಾದರೆ ಬರೆಯುವದಿನ್ನೊಂದುರೀತಿ. ಆಡಿದಂತೆಯೇ ಬರೆದರೆ ಓದುವದು ಬಹುಕಷ್ಟ.

ಆದರೆ ಮಾತು ಒಂದೊಂದು ಭಾಗದಲ್ಲಿ ಒಂದೊಂದು ರೀತಿಯಾದರೂ ಬರೆಹದಲ್ಲಿಯೂ ಅದರ ಅರ್ಥವನ್ನು ಮಾಡಿಕೊಳ್ಳುವದರಲ್ಲಿಯೂ ಅಷ್ಟು ಹೆಚ್ಚಿನ ವ್ಯತ್ಯಾಸವಿಲ್ಲ. ಆದುದರಿಂದ ಸರ್ವಸಾಮಾನ್ಯವಾದ ಬರೆಯುವ ಭಾಷೆಯಲ್ಲಿಯೇ ಮೋಹನಾಸ್ತ್ರವನ್ನು ಬರೆಯುವ ಪ್ರಯತ್ನವು ಮಾಡಲ್ಪಟ್ಟಿದೆ. ಆದರೆ ನಾಟಕದ ಮುಖ್ಯ ಉದ್ದೇಶವು ಜನಸಾಮಾನ್ಯಕ್ಕೆ ಸಾರಾಂಶ ರೂಪವಾಗಿಯಾದರೂ ಅದರ ವಿಷಯಗಳು ತಿಳಿದು ಬರಬೇಕು ಎಂಬುದಾಗಿರೋಣದರಿಂದ, **ಆಡುವವರು ಅಲ್ಲಿಯ ಜನರ ಮಾತಿಗೆ ತಕ್ಕಮಟ್ಟಿಗೆ ಹೊಂದಿಸಿಕೊಂಡು ಆಡುವದುತ್ತಮ.** ದೃಷ್ಟಾಂತಕ್ಕೆ ಮೈಸೂರಿನವರು 'ಬರುತ್ತದೆ' ಎಂಬದನ್ನು 'ಬರುತ್ತೆ' ಎಂದು ಆಡುತ್ತಾರೆ. 'ಹೋಗುವದಕ್ಕೆ ಎಂಬದನ್ನು 'ಹೋಗೋಕೆ' ಎಂದು ಆಡುತ್ತಾರೆ. ಪ್ರಾಂತ್ಯದ ರೀತಿಯಂತೆ ಹಾಗೆ ಸ್ವಲ್ಪಮಟ್ಟಿಗೆ ಬದಲಾಯಿಸಿದರೆ ಅದರ ಪರಿಣಾಮವು ಚೆನ್ನಾಗುತ್ತದೆ. ಇದು **ಬೆಂಗಳೂರ ಎಮೆಟರ್ ಡ್ರೆಮೆಟಿಕ್ ಎಸೋಸಿಯೇಷನ**ನಲ್ಲಿ ಅನುಭವದಿಂದ ಅನೇಕರಲ್ಲುಂಟಾದ ಅಭಿಪ್ರಾಯ.

ಆದರೆ ಚಿಕ್ಕಪುಟ್ಟ ಮಾತುಗಳಿಗೆ ಮಾತ್ರ ಇದು ಒಪ್ಪುತ್ತದೆ;ಅಲ್ಲದೆ ಪ್ರಣಿಧಾನ (abstract contemplation) ದಲ್ಲಿ, ತತ್ತ್ವಪ್ರದರ್ಶನಗಳನ್ನು ವಿವೇಚಿಸುವ ಗಂಭೀರವಾಣಿಯಲ್ಲಿ, ಅಥವಾ ಸುಸಂಸ್ಕೃತರ ಆತ್ಮಗತ ಸಂಭಾಷಣ (soliloquy) ದ ವೇಗದಲ್ಲಿ ಈ ರೀತಿಯು ಸರಿಹೋಗುವದಿಲ್ಲ. ಅಂಥ ವಿಷಯಗಳ ಪ್ರವಾಹದಲ್ಲಿಯೋ ಗಾಂಭೀರ್ಯದಲ್ಲಿಯೋ ಇರುವದು ಜೋರು, ಸೊಗಸು. ಭಾಷೆಯು ಸಾಮಾನ್ಯರೀತಿಗೂ ಪ್ರೌಢಗತಿಗೂ ತಕ್ಕ ಸ್ಥಾನಮಾನಗಳನ್ನು ಕೊಡಬೇಕೆಂಬುದೇ ಇದರ ಸಾರಾಂಶ.

## ಈ ನಾಟಕವನ್ನು ಬರೆಯಲಿಕ್ಕೆ ಕಾರಣ.

ನಾಲ್ಕು ವರ್ಷಗಳ ಹಿಂದೆ ನಾನು ಬೆಂಗಳೂರಿನಲ್ಲಿದ್ದಾಗ 'ಎಮೆಟರ್' ಸಂಘಕ್ಕೆ ಮುಖ್ಯ ಪೋಷಕರಾದ ಯುವರಾಜರು, ಸಂಘವು ಕನ್ನಡಿಸಿ ಪ್ರದರ್ಶಿಸಬೇಕೆಂಬ ಇಚ್ಛೆಯಿಂದ ಕೆಲವು ಮರಾಠಿ ನಾಟಕ ಪುಸ್ತಕಗಳನ್ನು ಕಳಿಸಿದ್ದರು. ಸಂಘದ ಕಾರ್ಯದರ್ಶಿಗಳಾದ ಶ್ರೀ. ಬಿ. ಶ್ರೀನಿವಾಸ ಅಯ್ಯಂಗಾರರು ಅವನ್ನು ತಕ್ಕೊಂಡು ನನ್ನಲ್ಲಿಗೆ ಬಂದರು. ತಮ್ಮ ಉದ್ದೇಶವನ್ನು ಅವರು ನನಗೆ ತಿಳಿಸಿದಾಗ ನಾನು ಆ ಪುಸ್ತಕಗಳಲ್ಲಿ ಒಂದು ಮಾತ್ರವೇ ಕನ್ನಡಿಸಲಿಕ್ಕೆ ಯೋಗ್ಯವಾಗಿದೆಯೆಂದದನ್ನು ಆರಿಸಿಕೊಂಡೆ. '**ಹಾಚ್ ಮುಲಾಚಾ ಬಾಪ್**' ಎಂಬದೇ ಆ ನಾಟಕವು. ಅದನ್ನು ನಾನು ಮೆಚ್ಚಲಿಕ್ಕೆ ಕಾರಣವೇನಂದರೆ ಹೆಚ್ಚು ಕಡಿಮೆ ಅದರ ಕಥೆಯನ್ನು ನಾನು ಮೊದಲೇ ಚಿಕ್ಕಂದಿನಲ್ಲಿಯೇ ಕೇಳಿದ್ದೆ. ಅದು ನನ್ನ ಮನಸ್ಸಿನಲ್ಲಿ ಎಲ್ಲಿಯೋ ಒಂದು ಮೂಲೆಯಲ್ಲಿ ಮನೆಮಾಡಿ ಕೂತುಕೊಂಡಿತ್ತು. ತನ್ನ ಮುದ್ರೆಗೆ ಸರಿಯಾದ ವಸ್ತುರಚನೆಯು (plot) ಆ ನಾಟಕದಲ್ಲಿ ಕಂಡುಬಂದೊಡನೆಯೇ ಮನಸ್ಸು ಅದನ್ನೇ ಆರಿಸಿತು. ಸಮಾಜದ ಸ್ಥಿತಿಗತಿಯನ್ನು ಕಂಡರೆ ಅದಕ್ಕೆ ಬೇಕಾದಷ್ಟು ಉಪದೇಶವು-ಅದನ್ನು ಆಚರಿಸುವದು ಬಿಡುವದು ಹೇಗೂ ಇರಲಿ-ಏನೋ ಅದರಲ್ಲಿದೆ ಎಂಬ ಮನವರಿಕೆಯು ಕಥೆಯನ್ನು ಕೇಳಿದಾಗಲೇ ನನ್ನಲ್ಲಾಗಿತ್ತು, ಇದಿನ್ನೊಂದು ಕಾರಣ. ಆದರೆ ವಸ್ತುರಚನೆಯನ್ನು ಹಾಗೆಯೇ ಪೂರ್ತಿಯಾಗಿಟ್ಟುಕೊಳ್ಳುವದಕ್ಕೂ ಅದನ್ನು ಇದ್ದಂತೆಯೇ ಕನ್ನಡಿಸುವದಕ್ಕೂ ನನ್ನ ಮನಸ್ಸು ಒಪ್ಪಲಿಲ್ಲ. ನನಗೆ ಈ ವಿಷಯ

ಗಳಲ್ಲಿ ಹಲಕೆಲವು ಆಕ್ಷೇಪಣೆಗಳಿವೆ. ಆದುದರಿಂದ 'ವಸ್ತುವನ್ನು ನನ್ನ ಮನಸ್ಸಿಗೆ ಬಂದಂತೆ ಮಾರ್ಪಡಿಸಿ ಬೆಳೆಸಿ ಬರೆದರೆ ಆಗಬಹುದೋ' ಎಂದು ನಾನು ಕೇಳಿದ್ದಕ್ಕೆ ಶ್ರೀನಿವಾಸಯ್ಯಂಗಾರರು ಒಪ್ಪಿಕೊಂಡರು. ಕೂಡಲೆ ಆ ಕೆಲಸವನ್ನು ಕೈಕೊಂಡು ಬರೆಯಲಾರಂಭಿಸಿದೆ. ನಾಟಕವನ್ನು ಕುರಿತು ನನ್ನ ತಿಳುವಳಿಕೆಯಂತೆ ನಾನು ರಚನೆ (arrangement) ಮತ್ತು ಪೋಷಣೆಗಳನ್ನು (development) ನಡೆಸಿದ್ದೇನೆ. **ಪೋಷಣಕ್ರಮದಲ್ಲಿ ನಾನು ಮನೋವೃತ್ತಿಗಳ ಸ್ಥಿತಿಗತಿಗಳಿಗೂ ಸಮಾಜ ರೂಢಿ ಪರಿಸ್ಥಿತಿಗಳಿಗೆ ಅವುಗಳ ಮೇಲಿರುವ ನಿಕಟ ಪ್ರಭಾವಕ್ಕೂ ಮೇಲಿನ ಸ್ಥಾನವನ್ನು ಕೊಟ್ಟಿರುತ್ತೇನೆ.** ಸಾಮಾನ್ಯ ಮಾನವನು ಇತರ ಜೀವರಾಶಿಗಳಂತೆ ಇವುಗಳಿಗೊಳಪಟ್ಟ ಒಂದು ಜೀವಿ; ಆತನು ವಿಕಾಸಗೊಳ್ಳಬೇಕಾದರೆ ಪರಿಸ್ಥಿತಿಯೇ ಯುಕ್ತಿಯುತವಾಗಿ ಸಜ್ಜುಗೊಳ್ಳಬೇಕು; ಬಹುಜನಹಿತವೇ ಅಂಥ ಸಂಸ್ಕರಣದ ಧ್ಯೇಯವಾಗಿರಬೇಕು; ಅಂಥ ಸಂಸ್ಕರಣವನ್ನು ಭಯದಾಕ್ಷಿಣ್ಯಗಳಿಲ್ಲದೆ ಕೈಕೊಂಡು ನಡೆಸುವದೇ ನಿಜವಾದ ಧರ್ಮ. **ಭಯದಾಕ್ಷಿಣ್ಯ ಸ್ವಾರ್ಥಗಳಿಗಾಗಿ ನಡೆಸುವ ಪೂರ್ವಾಚಾರವೂ ಧರ್ಮವಲ್ಲ, ಸುಧಾರಣೆಯೂ ಧರ್ಮವಲ್ಲ**–ಎಂಬದನ್ನು ತೋರಿಸುವದೇ ನಾನಿದರಲ್ಲಿ ಅವಲಂಬಿಸುವ ನೀತಿರೀತಿಗಳ ಉದ್ದೇಶ.

ಸಂಘದ ಹಾಳು ನಡತೆಯಿಂದಲೇ ಸದ್ಗುಣ ಸದುಪಾಯಪ್ರಿಯನಾದ ಮೋಹನನು ಸದುದ್ದೇಶಕ್ಕಾಗಿ ದುರುಪಾಯಗಳನ್ನು ನಡೆಸುವವನಾಗುತ್ತಾನೆ. **ಅನುಕೂಲ ಒಂದನ್ನೇ ನೋಡಿಕೊಂಡು ಜೀವಿಸುವದೇ ಅಧರ್ಮ.** ಅದೇ ಅವಿಚಾರದ ತುದಿಬಾಲ, ಅದೇ ದುರ್ಬಲರಿಗೆ ಹಿಂಸೆ, ದುರ್ಬಲತೆಯ ಮೂಲ. ಅದರಿಂದಲೇ ವಿಚಾರಶೀಲನಾದ ಶಿವರಾಯನು ಶೀತೋಷ್ಣಗಳೆರಡನ್ನೂ ಸೇರಿಸಿ ಉಸಿರಾಡುತ್ತಾನೆ, ಅದರಿಂದಲೇ ಧರ್ಮಪ್ರಿಯನಾದ ನೀಲಕಂಠ ಶಾಸ್ತ್ರಿಯು ಬೇಡವೆಂದರೂ ರೂಢಿಯ ಹೊಡೆತದಿಂದ ಅಸತ್ಯ ವಂಚನ ನಿರ್ದಯೆಗಳ ಕಡೆಗೆ ಸೆಳೆಯಲ್ಪಡುತ್ತಾನೆ, ಅದರಿಂದಲೇ ಸುಶಿಕ್ಷಿತನಾದ ರಮೇಶನೂ ದಿಕ್ಕುತೋಚದವನಾಗಿ ತನ್ನ ಭವಿಷ್ಯವನ್ನು ತಾಳಮೇಳವಿಲ್ಲದ ಭೂತಕ್ಕೊಪ್ಪಿಸುವವನಾಗುತ್ತಾನೆ. ಅದರಿಂ

ದಲೇ ಸುಬ್ಬಣ್ಣಾಚಾರ್ಯನು ಗಾಳಿಗೆ ಬಿದ್ದ ಗರಿಯಂತಾಗಿ ಆ ಅಭ್ಯಾಸದಿಂದ ಸ್ವತ್ವವನ್ನೇ ಕಳಕೊಂಡವನಾಗುತ್ತಾನೆ. ಈ ಧರ್ಮದ ಸುಳ್ಳು ಹೆಸರಿನಿಂದ ವ್ಯಕ್ತಿಗೆಂದಿಗೂ ಯೋಗ್ಯ ವಿಚಾರ ವಾಕ್ಚಾತುರ್ಯ ಸ್ವಾತಂತ್ರ್ಯವನ್ನು ಕೊಡದ ರೂಢಿಯೇ ತತ್ತ್ವ ವ್ಯಕ್ತಿತ್ವಗಳನ್ನು ಸುಟ್ಟುಹಾಕುವ ಬೆಂಕಿಯು. ತತ್ತ್ವವಿಲ್ಲದಲ್ಲಿ ಸತ್ವವೂ ಇಲ್ಲ. ಇವಿಲ್ಲದ ಸಮಾಜದಲ್ಲಿ ವೀರ್ಯವಿಲ್ಲ, ವಿಕಾಸವಿಲ್ಲ. ಅಂಥ ಸಮಾಜದಲ್ಲಿರುವವರು ಮನುಷ್ಯರಲ್ಲ, ಹೊಳೆಯಲ್ಲಿ ಹರಿಯುವ ಹಾಳುಮನೆಯ ಕಟ್ಟಿಗೆ ಬಿದುರುಗಳು. ನಾನು ನಾಟಕವನ್ನು ಹೀಗೆ ನನ್ನ ರೀತಿಯನ್ನವಲಂಬಿಸಿಕೊಂಡು ಬರೆವಿರೋಣದರಿಂದ ಎಲ್ಲ ತಪ್ಪುಗಳಿಗೂ ನಾನೇ ಜವಾಬ್ದಾರನು, ಅಲ್ಲದೆ ಇದನ್ನು ಬರೆಸಿದ ಮರಾಠಿ ನಾಟಕವಲ್ಲ. ನನ್ನ ಆಚಾರನೀತಿಗೆ ಸರಿಯಾದ ಜನತಾಜನಾರ್ದನ ಸೇವಾಭಿಲಾಷೆಯೇ ನನ್ನೀ ಬರಹದ ಸ್ಫೂರ್ತಿಯು.



*

# ಮೋಹನಾಸ್ತ್ರ

## (ಸೊಕ್ಕಿದ ಮಾವನಿಗೆ ಸಿಕ್ಕಿದ ಹಾದಿ)

### ಅಂಕ ೧. ದೃಶ್ಯ ೧.

[ಜಹಗೀರದಾರ ಶಿವರಾಯರ ಮನೆಯ ದಿವಾನಖಾನೆ. ರಾಯರು ಕುರ್ಚಿಯ ಮೇಲೆ ಕುಳಿತಿದ್ದಾರೆ. ಒಂದು ಮೇಜು ಇದಿರಿನಲ್ಲಿದೆ. ಅದರ ಮೇಲೆ ಕೆಲವು 'ಲಾ' ಪುಸ್ತಕಗಳು ಅಲ್ಲಲ್ಲಿವೆ. ಕೆಲವು ದಸ್ತಾವೇಜುಗಳ ಕಟ್ಟುಗಳೂ ಇವೆ. ಜಹಗೀರದಾರರು ವಕೀಲರು ಸಹ ಆಗಿದ್ದಾರೆ. ಮುಂದೆ ಬಲಗಡೆ ಅವರ ಗುಮಾಸ್ತ ಸುಬ್ಬಣ್ಣಾಚಾರ್ಯರು ಮಸಿಯ ಚುಕ್ಕೆ ಪಟ್ಟೆಗಳಿಂದ ತುಂಬಿದ ಒಂದು ಹಳೆಯ ಜಮಖಾನೆಯ ಮೇಲೆ ಅದಕ್ಕೆ ತಕ್ಕ ಲೋಡನ್ನು ಇಟ್ಟುಕೊಂಡು ಕೂತಿದ್ದಾರೆ. ಮುಂದೆ ತಮ್ಮ ಚಿಕ್ಕ ಮೇಜು ಇದೆ. ಅದರಮೇಲೆ ಹಿತ್ತಾಳೆಯ ಒಂದು ಮಸೀಬುಡ್ಡಿ ಮತ್ತು ಒಂದೆರಡು ಹಳೇ ಲೇಖಣಿಗಳಿವೆ. ಆಚಾರ್ಯರು ಕಿವಿಯ ಮೇಲೊಂದು ಲೇಖಣಿಯನ್ನಿಟ್ಟುಕೊಂಡು ಕೆಲವು ಕಾಗದದ ಕಟ್ಟುಗಳನ್ನು ಬಿತ್ತಟ್ಟಿಗಿಡುತ್ತಿದ್ದಾರೆ. ಶಿವರಾಯರು ಒಂದು ಪತ್ರವನ್ನು ಓದುತ್ತಿದ್ದಾರೆ ಹಾಗೆಯೇ ಫಕ್ಕನೆ ಎದ್ದುನಿಂತು]

ಶಿವ :—(ಗಟ್ಟಿಯಾಗಿ) ಆಚಾರ್ಯರೇ–

ಸುಬ್ಬ :—(ಬೆಚ್ಚಿಬಿದ್ದು ಏಳುತ್ತಾ) ಬಂದೆ–ಈಗಬಂದೆ.

ಶಿವ :—ಬಂದೆ ? ಯಾರು ಬಾ ಎಂದರು. ಇದು ಕೇಳಿ, ಇಲ್ಲಿ ನೋಡಿ, ಈ ಪತ್ರ ! ಅಲ್ಲಾ–ನಮ್ಮ ರಮೇಶ ಕೆಲಸಕ್ಕೆ ಬಾರದವನೆಂದು ತಿಳದು ಕೊಂಡಿದ್ದಾರೋ ಇವರು ? ೧೨೦೦ ರೂಪಾಯಿ ಅಂತೆ ಅವರು ವರದಕ್ಷಿಣೆಗಾಗಿ ಕೊಡುವುದು ! ಮೆಟ್ರಿಕ್ ಪಾಸಾದ ಹುಡುಗನಾದರೂ ಸಿಕ್ಕಿಯಾನೇ ಅಷ್ಟಕ್ಕೆ ? ಈಗಲೇ ಬಿ. ಎ ಪ್ಯಾಸ್ ಮಾಡಬೇಕು; ಅಲ್ಲಿಂದ ಸೀಮೆಗೆ ಹೋಗಿ ಬ್ಯಾರಿಸ್ಟರ್‌ನಾಗಿ ಆಯ್. ಸಿ. ಯಸ್ ಸಿಗಿಯುವುದಕ್ಕೆ ಎಷ್ಟು ಹೊತ್ತು ಬೇಕು ನಮ್ಮವನಿಗೆ ?

ಇಂಥಾ ಯೋಗ್ಯತೆಗೆ ೧೨೦೦ ರೂಪಾಯಿಯಂತೆ ! ಹೀಗೆ ಬರೆಯಲಿಕ್ಕಾದರೂ ನಾಚಿಕೆಯಾಗುವುದಿಲ್ಲವೆ ಈ ಮೂರ್ಖರಿಗೆ ? ಊಂ—ಇದಕ್ಕೇ ಅಲ್ಲವೇ ಕಲಿಕಾಲ ಅನ್ನುವುದು ತಿಳಿದವರು ? ತಮ್ಮ ಹುಡುಗನಿಗೇನೋ ೨೦೦೦ ರೂಪಾಯಿ ಕಸಕೊಂಡರು ಪುಣ್ಯಾತ್ಮರು. ನನ್ನ ಹುಡುಗನಿಗೆ ಕಟ್ಟಿದ ಬೆಲೆ ೧೨೦೦ ಮಾತ್ರವೇನೋ ? ಒಳ್ಳೇ ವ್ಯಾಪಾರ !

ಸುಬ್ಬ :—ಕೇಳಬೇಕೇ! ಎಲ್ಲಾ ಕಡೆ ನಡೆಯುವುದೇ ಇದು. ತನ್ನ ಹುಡುಗ ಅಂದರೆ ಮುದ್ದು. ಇತರರ ಮಕ್ಕಳೋ ಪೊದ್ಬು !–ನಮ್ಮ ರಮೇಶ ರಾಯರಿಗೆ ಮೂರುಸಾವಿರ ರೂಪಾಯಿ ಕೊಡಲಿಕ್ಕೆ ಎಷ್ಟು ಪ್ರಾಣ ಹೋಗುತ್ತದೆ !

ಶಿವ :—ಓಹೋ ನೀವೂ ಮೂರು ಸಾವಿರಕ್ಕೇ ನಿಲ್ಲಿಸಿಬಿಟ್ಟಿರೋ ? ಪೆಚ್ಚ್ಕ- ನಿಮ್ಮ ಯೋಗ್ಯತೇನೂ ಮೋರೆಮೇಲೆಯೇ ಕಾಣುತ್ತದೆ. ಎಲಾ ! ಒಂದು ನೂರುಪೇಜು ನಾಟಕ ಗೀಚಿಹಾಕಿಬಿಟ್ಟರೆ ಬರೆದಾತ ರೂಪಾಯಿ ಗಂಟು ಗಂಟೇ ಜೇಬಿಗೆ ಸೇರಿಸಿಕೊಳ್ಳುತ್ತಾನೆ. ನಮ್ಮ ಹುಡುಗನ ಯೋಗ್ಯತೆ ಅವನಿಗಿಂತಲೂ ಕಡಿಮೆಯಾಯಿತೇ ? ನೀವು ಮೂರ್ಖರು......ಶುದ್ಧ ಮೂರ್ಖರು.

ಸುಬ್ಬ :—(ಬಹಳ ದೈನ್ಯದಿಂದ) ಹೌದು ಸ್ವಾಮಿ ಹೌದು.

ಶಿವ :—ಹೌದೋ ! ಮೂರುಸಾವಿರವೇನೋ ನಮ್ಮ ರಮೇಶನ ಯೋಗ್ಯತೆಗೆ ? ಬುದ್ಧಿ ಇಲ್ಲ ನಿಮಗೆ. ಇಂಥ ಹುಡುಗನಿಂದ ಒಂದು ಕೋಟಿ ಸಂಪಾದಿಸುವವರು ಎಷ್ಟೋ ಮಂದಿ ತಂದೆಯರು ಇದ್ದಾರೆ. ಗೊತ್ತಿದೆಯೊ ? ಮೂರು ಸಾವಿರ ರೂಪಾಯಿ ಕಟ್ಟಿದ್ದು ಲೆಕ್ಕಾಚಾರವಾಗಿ ಮೂರುವರೆ ಮೊಳದ ದೇಹಕ್ಕೊ ? ಓಹೋ ! ಮೊಳಕ್ಕೆ ಸಾವಿರ ಅಂತ ಠರಾವುಮಾಡಿದ್ದಿರೊ ? ಹಾಗೂ ಅರ್ಧಮೊಳ ಉಳಿಯಿತಲ್ಲವೆ ? ಅದರ ಬೆಲೆ? (ಒತ್ತಿಕೊಂಡು) ನಿರ್ಧಾರಮಾಡಿಕೊಂಡಿದ್ದೇನೆ ಸ್ವಾಮಿ. ನಾಲ್ಕು ಸಾವಿರ ರೂಪಾಯಿ ಸರಿಯಾಗಿ ಕೊಟ್ಟೇ ತೀರಬೇಕು.

ಸುಬ್ಬ :—(ಬರೆಯಲಿಕ್ಕೆ ಪ್ರಾರಂಭ)

ಶಿವ :—ಏನು ಬರೆಯುತ್ತಾ ಇದ್ದೀರಿ ? ಕೌನ್ಸಿಲ್ ನಿರ್ಧಾರ ಅಂದುಕೊಂಡಿದ್ದೀರಾ ? ನನ್ನ ರಾಜ್ಯದಲ್ಲಿ ಸಭೆಗಿಭೆ ಒಂದೂ ನಡೆಯದು. ಇಲ್ಲಿ ಏಕತಂತ್ರ ರಾಜ್ಯ.[1] ಬರೆಯುವುದು, ಬರೆಸುವುದು ಒಂದೂ ಇಲ್ಲ. ನೋಡಿ, ನಾನು ಹೇಳಿಬಿಟ್ಟೆ. ಸಾಕು ಅಷ್ಟೇ. ಮರೆಯಬೇಡಿ.

ಸುಬ್ಬ :—ಛೆ, ಛೆ–ಮರೆಯುವುದೇ ! ನಾಲ್ಕು ಸಾವಿರದ ಅಂಕೆ (ಎದೆಯ ಮೇಲೆ ಕೈ ಸವರಿ) ಇಲ್ಲಿ ಕೊರೆದುಬಿಟ್ಟಿದ್ದೇನೆ. ನಗದು ನಾಲ್ಕು ಸಾವಿರವೋ ಅಥವಾ ಜಾಮೀನು ಪ್ರಾಮಿಸರಿ ನಡೆಯುವ ಸಂಭವವುಂಟೋ ?

ಶಿವ :—ತಲೇ ಬುರುಡೆ ! ನಗದು ನಾಲ್ಕು ಸಾವಿರ. ತಿಳಿಯಿತೋ ?

ಸುಬ್ಬ :—ಸಾಕೋ ಇಷ್ಟೇ ! ಅಲ್ಲ–ಇದು ಹುಡುಗನಿಗಾಯಿತು. ಹುಡುಗನ ಯಜಮಾನ ರಾವ್‌ಬಹದ್ದೂರ್ ಎಂಬುದನ್ನು ಮರೆತುಬಿಡುವುದೇ ? ಪದವಿಗೆ ತಕ್ಕ ಮಾನ ಮರ್ಯಾದೆ, ಸೊತ್ತು ಸಾಮಗ್ರಿ, ಅಷ್ಟೊಂದು ತಿಳಿದುಕೊಳ್ಳಲಾರೆನೆ ?

ಶಿವ:—(ಎದ್ದು ಅತ್ತಿಂದಿತ್ತ ತಿರುಗುತ್ತ) ಬಿ. ಎ. ರಿಜಲ್ಟ್ ಈಗ ಔಟ್[2] ಆಗಬೇಕು......ಎಂಥಾ ವಿಚಿತ್ರ ಹುಡುಗ ! ರಿಜಲ್ಟ್ ನೋಡದೆ ಮನೆಗೆ ಬರುವುದಿಲ್ಲವಂತೆ !

ಸುಬ್ಬ :—ನ್ಯಾಯವೇ. 'ಫೇಲ್'[3] ಆಗುವ ಭಯವಿದ್ದರಲ್ಲವೆ ಮೋರೆ ಮುಚ್ಚುವುದು ? ಪ್ಯಾಸೇ ಪ್ಯಾಸು. ಆದರೆ ಒಂದು ಮಾತು...ಯಾಕೆ ಮನೆಬಿಟ್ಟು ಇರಬೇಕು ? ಯುವಕರಿಗೆ ಬುದ್ಧಿಯಿಲ್ಲ–ಅಂತ ಹೇಳುವುದು ಇಷ್ಟಕ್ಕೇ. ಇದು ವಿವಾಹ ವ್ಯಾಪಾರದ ಸೀಜನ್[4] ಸಂತೆಯಿದ್ದಾಗಲಲ್ಲವೆ ವ್ಯಾಪಾರ ಮಾಡಬೇಕು ? ವರನನ್ನಾರಿಸಲಿಕ್ಕೆ ಬಂದವರನ್ನು ಕಂಡು ತನ್ನ ಲಾಭವನ್ನು ಮಾಡಿಕೊಳ್ಳುವುದನ್ನು ಬಿಟ್ಟು, ಬೊಂಬಾಯಿಯ ಬೀದಿಬೀದಿಯಲ್ಲಿ ತಿರುಗುವುದರಿಂದೇನು ಉಪಯೋಗ ?......ಮುಂದೆ......

---

1. Antocracy. 2. Out. 3. Fail. 4. Season.

ಶಿವ :—ಅಂ... ಬಾಯಿಮುಚ್ಚು ! ನಮ್ಮ ರಮೇಶನು-ಏನು-ಸೋಮಾರಿಯಾಗಿ ತಿರುಗುತ್ತಿದ್ದಾನೊ? ಕೇಳಿದವರಾದರೂ ಏನೆಂದಾರು?...... ಕೀರ್ತಿ ತಂದುಕೊಟ್ಟಂತಾಯಿತು-ಮನೆಯವರೇ ಹೀಗೆ ಬೊಗಳಿದರೆ! ಹುಡುಗಿ, ವರದಕ್ಷಿಣೆ ಬಹುಮಾನಗಳು-ಎಲ್ಲಾ ವಾಪಸ್ ಹೋಗುವುದೇ ಮತ್ತೆ ! ಕತ್ತೆಯಾಗಿದ್ದೀರಿ-ಕತ್ತೆ.

ಸುಬ್ಬ :—ಹೌದು ಸ್ವಾಮಿ ಹೌದು ! ತಪ್ಪಾಯಿತು ನಿಜ ! ನಾವು ಮಾತಾಡಿದರೆ ಏನಾಯಿತು ? ನಮಗೆ ಹೊಟ್ಟೇಪಾಡೇ ದೊಡ್ಡ ವಿಶೇಷ. ದೊಡ್ಡಸ್ತಿಕೆ ನಮ್ಮಂಥವರಿಗೆಲ್ಲಿಂದ ಬರಬೇಕು ಸ್ವಾಮಿ ? ಅದು ಒಳಗಿದ್ದರಲ್ಲವೆ ನಾಗರಿಕರ ಇಂಪು ಸೊಂಪಾದ ಮಾತುಗಳು ಈ ಗಂಟಲಿನಲ್ಲಿ ತಿರುಗುವುದು.—ಕಷ್ಟ ! ತಪ್ಪಾದ್ದು ನಿಜ (ಆಲೋಚಿಸಿದಂತೆ ನಟಿಸಿ) ರಮೇಶರಾಯರು ಸೀಮೆಗೆ ಹೋಗುವ ತಯಾರಿಗೆ ಬೊಂಬಾಯಿಯಲ್ಲಿ ಏನೋ ಗಡಿಬಿಡಿ ಮಾಡುತ್ತಿದ್ದಾರೆಂದು ತೋರುತ್ತದೆ.

ಶಿವ :— ಸಂದೇಹವೇನು ? (ಮಗಳು ಕುಮುದ ಒಂದು ಪುಸ್ತಕವನ್ನು ಹಿಡಿದುಕೊಂಡು ತಂದೆಯಲ್ಲಿಗೆ ಬರುತ್ತಾಳೆ) ನೀನೇ ಬಂದೆಯೋ-ಸರಿ. ಏನೇ ಕುಮುದಾ-(ಮೇಜಿನಮೇಲಿಂದ ಒಂದು ಪತ್ರವನ್ನು ಆಕೆಗೆ ಕೊಡುತ್ತ) ಇದು ನೋಡು. ನಿನ್ನಣ್ಣ ಹೀಗೆಂದು ಏಕೆ ಬರೆದಿದ್ದಾನೆ ?

ಕುಮುದ :—(ಪುಸ್ತಕವನ್ನು ಮೇಜಿನಮೇಲಿಟ್ಟು) ಹೀಗೆ...ಅಂದರೆ ?

ಶಿವ :—ಇಷ್ಟರವರೆಗೆ ಆತನು ಬೊಂಬಾಯಿಯಲ್ಲಿ ಏತಕ್ಕಾಗಿದ್ದಾನೆಂಬುದಕ್ಕೆ ನಿನಗೇನಾದರೂ ಇದಕ್ಕೆ ಮೊದಲೇ ಪತ್ರಬಂದಿದೆಯೊ ?

ಕುಮುದ :—ಉಂ— (ತನ್ನ ಆ ಪುಸ್ತಕದೊಳಗಿದ್ದ ಪತ್ರವನ್ನು ತೆಗೆದು ಓದುತ್ತಾಳೆ) 'ರಿಜಲ್ಟ್ ಬರುವವರೆಗೂ ನಾನು ಬೆಂಗಳೂರಿಗೆ* ಬರಲಾರೆ. ವ್ಯರ್ಥವಾಗಿ ಕ್ಲಬ್ ಹೋಟಲುಗಳಿಗೆ ಹೋಗಿ

---

* ಈ ನಾಟಕವನ್ನು ಎಲ್ಲಿ ಆಡುತ್ತಾರೋ ಆ ಊರ ಹೆಸರನ್ನು ಹಾಕುವದುತ್ತಮ.

ಹೊತ್ತು ಹಾಳುಮಾಡುವುದಕ್ಕಿಂತ ಯಾವುದಾದರೊಂದು ಸತ್ಕಾರ್ಯವನ್ನು ಮಾಡಿಕೊಂಡಿರುವುದು ಲೇಸೆಂದು ನನಗೆ ತೋರುತ್ತದೆ. ಹತ್ತಿಯ ಮಾರಾಟಕ್ಕೆ ಒಂದು ಹೊತ್ತಿದ್ದಂತೆ ವಧೂವರರ ಖರೀದಿಗೂ ಇದೊಂದು ಕಾಲ. ಇಂಥಾ ವ್ಯಾಪಾರಕ್ಕೆ ವಿವಾಹವೆಂಬ ಹೆಸರಿಟ್ಟವರು ಎಂತಹ ಪಂಡಿತರು! ಈ ವ್ಯಾಪಾರವೇನೋ ನಮ್ಮ ಜನರಿಗೆ ಒಂದು ದೊಡ್ಡ ಬಿಡಲಾರದ ಧರ್ಮವಂತೆ! ನಿನ್ನ ನನ್ನಂಥ ಬಡಪಾಯಿಗಳೇ ಈ ಸಂತೆಯ ಸಾಮಗ್ರಿಗಳು ಅಂದರೆ. ವ್ಯಾಪಾರಸ್ಥರು ಹಿರಿಯರು! ಬುದ್ಧಿಯುಳ್ಳವರು! ದೂರವಿರುವುದೇ ಉತ್ತಮವಲ್ಲವೆ ಈ ದಿನಗಳಲ್ಲಿ?'

ಸುಬ್ಬ:—(ಕೂಗುತ್ತ) ಹೇಳಲಿಲ್ಲವೆ ನಾನು ನನ್ನ ಲೆಕ್ಕ ತಪ್ಪುವುದೇ ಇಲ್ಲವೆಂದು!

ಶಿವ:—(ಕಣ್ಣೆತ್ತಿ ಬಿರ್ರನೆ ಆತನನ್ನು ನೋಡುತ್ತಾನೆ.)

ಸುಬ್ಬ:—(ಪೆಚ್ಚಾಗಿ) ಓದಿ ಅಮ್ಮ-ನಡೆಯಲಿ.

ಕುಮುದ:—(ಮುಂದೆ ಓದುತ್ತಾಳೆ) 'ಇನ್ನೊಂದು ಮಾತು. ಇಲ್ಲವಾದರೆ ಇಂಥಾ ಕಾಲದಲ್ಲಿ ಬೆಳೆದ ಕನ್ಯೆಯರಿಗಾಗಿ ವರನನ್ನು ಹುಡುಕುವುದಕ್ಕೆ ಹುಡುಕಿ ಹುಡುಕಿ ಸೋತ ಎಷ್ಟೋ ತಂದೆಯರು ಬರುತ್ತಾರೆ. ಕಾಲೇಜಿನಲ್ಲಿ ವಿದ್ಯಾವಂತರನ್ನು ಹುಡುಕುವವರಿಲ್ಲವಾದರೂ ವರರನ್ನು ಹುಡುಕುವವರೇನೋ ಧಾರಾಳವಾಗಿದ್ದಾರೆ. ಇದು ತಪ್ಪು. ಆದರೂ ಏನುಮಾಡಿಯಾರು—ಪಾಪ, ಹೆಣ್ಣು ಮಕ್ಕಳಿದ್ದವರು! ಇಂಥಾ ಸಂದರ್ಭದಲ್ಲಿ ವ್ಯರ್ಥವಾದ ಖರ್ಚು ಕನ್ಯೆಯ ಕಡೆಯವರಿಗಾಗದಂತೆ ಅವರಿಗೂ ಅನುಕೂಲತೆ ಮಾಡಿಕೊಡಬೇಕೆಂದು ನನ್ನ ಸಹಪಾಠಿಗಳಾಗಿರುವ **ಅವಿವಾಹಿತ ವಿದ್ಯಾರ್ಥಿಮಂಡಲದವರು** ನಿರ್ಧಾರಮಾಡಿಕೊಂಡಿದ್ದಾರೆ.'

ಸುಬ್ಬ:—ಅಲ್ಲಾ—ಇಂಥ ಪತ್ರ ನಿಮ್ಮಪ್ಪಕ್ಕೆ ನೀವೇ ಇಟ್ಟುಕೊಂಡು ಬಿಟ್ಟರೆ!!

ಶಿವ :—(ಸ್ವಗತ) ಹುಡುಗನ ತಲೆ ತಿರುಗಿದೆ. ತಕ್ಕ ಕಾಲದಲ್ಲಿ ಇವನಿಂದ ಮೋಸವಾಗುವಂತಿದೆ. (ಸುಬ್ಬಣ್ಣನ ಕಡೆಗೆ ತಿರುಗಿ) ನೋಡಿ ದಿರೋ—ನಮ್ಮ ಹುಡುಗನ ವಿಚಾರ, ಎಷ್ಟು ಉತ್ತಮವಾಗಿದೆ! ಆಹಾ! ಬೀಜದ ಗುಣ ಮೊಳಕೆಯಲ್ಲಿಯೇ ಕಾಣುವುದು ಎಂಬ ಹಿರಿಯರು ಮಾಡಿಟ್ಟ ಗಾದೆ ಏನಾದರೂ ಸುಳ್ಳಾದೀತೇ? ಮನುಷ್ಯ ನಾಗಿರುವವನು ಈ ಪ್ರಕಾರವಾಗಿಯೇ ಇರತಕ್ಕದ್ದು. ಅತ್ಯುಚ್ಚವಾದ ಗಮ್ಯವಿರಬೇಕು. ಆವಾಗ ತಾನೇ ಮನುಷ್ಯ—ಅಲ್ಲವೇ!

ಕುಮುದ :—ಇದೆಂಥ ಧ್ಯೇಯದ ವಿಚಾರ ಅಪ್ಪಾ! ವಿಚಾರವೇನೋ ಉಚ್ಚವಾಗಿರಬೇಕು,—ಸರಿ—ಆದರೆ ಆಚಾರದ ಗತಿ ಹ್ಯಾಗೆ!

ಶಿವ :—ನೋಡು. ಆಚಾರವೆಂದರೆ—ವ್ಯವಹಾರ. ವ್ಯವಹಾರವೆಂದರೆ ಅನು ಕೂಲವಾದದ್ದು. ಇಷ್ಟು ಗೊತ್ತಿಲ್ಲವೇ?

ಕುಮುದ :—ವ್ಯವಹಾರವೆಂದರೆ ವ್ಯಾಪಾರವೇನೋ ಮತ್ತೆ?

ಶಿವ :—ಹಾಗನ್ನಬಾರದು. ಹಾಗನ್ನುವುದು ತಪ್ಪು.

ಕುಮುದ :— ವ್ಯವಹಾರವೆಂದರೆ ಲಾಭಕೊಡುವ ಚಿಲ್ಲರೆ ವ್ಯಾಪಾರ. ಮತ್ತು ವಿಚಾರವೆಂದರೆ ಎಂದೂ ಮಾರಾಟವಾಗಲಾರದ ಸೊತ್ತು. ಗಡಂಗಿನಲ್ಲಿ ಜಮೆಗೆ ಬಿದ್ದ ಹಳೆಯಸಾಮಾನು. ಹೀಗೇನಪ್ಪಾ?

ಶಿವ :—ತಲೆಹರಟೆ ಹುಡುಗಿ ನೀನು......ಮಗೂ, ಇದು ಹುಡುಗಿಯರಿ ಗೊಪ್ಪುವ ರೀತಿಯಲ್ಲ. ಇನ್ನೂ ಗಂಡನಿಗೆ ಬಲೆಹಾಕಬೇಕಾಗಿದೆ (ಸ್ವ) ಅಧಿಕಪ್ರಸಂಗಿ!

ಕುಮುದ :—ಗಂಡನಿಗೆ ಬಲೆಯೋ, ಹುಡುಗಿಯು ಬಲಿಯೋ? ಲಗ್ನ ಏಕೆ ಮಾಡಿಕೊಳ್ಳಬೇಕೋ! ಅದರ ತಲೆಬಾಲ ತಿಳಿಯದ ನಮಗೆ ಲಗ್ನ ವೇಕೆ?

ಶಿವ :—(ಇಬ್ಬರಿಗೂ) ವಿಚಾರವೇನೋ ಸ್ತುತ್ಯವೇ. ಇಷ್ಟರವರೆಗೆ ಎಲ್ಲಾ

ಹುಡುಗಿಯರೂ ಲಗ್ನಮಾಡಿಕೊಂಡಿದ್ದಾರೆ. ಈಗ ಕೆಲವರು ಮಾಡಿಕೊಳ್ಳುವದಿಲ್ಲವಾದರೆ ತೊಂದರೆ ಏನು ? ಎಷ್ಟೋ ಮಂದಿ ಬಾಲವಿಧವೆಯರು ಪವಿತ್ರವಾದ ಜೀವನವನ್ನು ಸಾಗಿಸುತ್ತಿಲ್ಲವೆ ? ಸ್ವಲ್ಪ ವಿಚಾರಿಸಿ ನೋಡಿದರೆ ಆ ಹುಡುಗಿಯರೂ ಅವಿವಾಹಿತರೇ ಅಲ್ಲವೆ ?

ಕುಮುದ :—ಗಂಡನನ್ನು ಕಳಕೊಂಡೇ ಪವಿತ್ರತೆಯುಂಟಾಗ ಬೇಕಾಗಿದೆಯಂತೆ! ಮದುವೆಯಿಲ್ಲದೆ ಪವಿತ್ರಳಾಗಿರುವುದು ಅಸಾಧ್ಯವೋ ?

ಶಿವ :—ಹುಡುಗಿಯರು ಮದುವೆಯಿಲ್ಲದೆ ಹ್ಯಾಗಿರಬೇಕಮ್ಮಾ? ಹುಡುಗರಿಗೇನು ಗತಿ ? ಪ್ರಪಂಚದ ವ್ಯವಹಾರವೆಲ್ಲವನ್ನೂ ನಿಲ್ಲಿಸಬೇಕೆಂದೋ ನಿನ್ನಾಶೆ ? ಅಯ್ಯೋ ಹುಚ್ಚೀ......ಯಾರು ತುಂಬಿಸಿದರಮ್ಮಾ ಇದನ್ನೆಲ್ಲಾ ನಿನ್ನ ತಲೆಯಲ್ಲಿ ?

ಕುಮುದ :—ಹುಡುಗಿಯರು ಮದುವೆಬೇಡ ಎಂದು ಹಠಹಿಡಿದರೆ ಅವರನ್ನು ಲಗ್ನಮಾಡಿಕೊಟ್ಟರಾದರೂ ಏನುಪಯೋಗ ? ಮನಸ್ಸು ಮರಗಂತಾದಮೇಲೆ ಕಿವಿ ಮೊರದಂತಾಗುವದೇನು ಸಿಕ್ಕಿದವರ ಮಾತು ಕೇಳಲಿಕ್ಕೆ ? ಅಯ್ಯೋ ಇದು ಲಗ್ನವೊ ? ನಮ್ಮ ಜೀವನ ವಿಕಾಸಕ್ಕೆ ‡ ವಿಘ್ನವೊ ? ಬೇವು ಅಶ್ವತ್ಥಮರಗಳಿಗೆ ಗಂಟು ಹಾಕಿ ಮರಿಸಿದಂತೆಯೋ ಈ ಮದುವೆ !

ಸುಬ್ಬ :— ಹಾಗಲ್ಲಮ್ಮಾ ಹುಡುಗಿಯರೆಲ್ಲಾ ಲಗ್ನಮಾಡಿಕೊಳ್ಳಬೇಕು ಎಂದಲ್ಲ ನಾನು ಹೇಳುವುದು. ಆದರೆ ಯಾವ ಹುಡುಗಿಯರ ತಂದೆತಾಯಿಗಳಿಗೆ ಹುಡುಗರು ಇದ್ದಾರೋ ಅಂಥಾ ಹುಡುಗಿಯರು ಲಗ್ನಮಾಡಿಕೊಳ್ಳಲಿಚ್ಛಿಸುವುದು ಕೇವಲ ಮೂರ್ಖತನ.

ಕುಮುದ :— ಸರಿ ತಿಳಿಯಿತು. ಆದಾಯವಿಲ್ಲದ ವ್ಯಾಪಾರವಾಗಬಹುದೆಂದೋ ಇಷ್ಟೆಲ್ಲಾ? ಒಳ್ಳೇ ಸಿದ್ಧಾಂತ ಆಚಾರ್ಯರೇ ! !

ಶಿವ :—ಆಚಾರ್ಯರನ್ನು ಏನು ಕೇಳುತ್ತೀಯಾ ? ಏನೋ ಒಂದು ಮಾತಾಡಿ

‡ Evolution

ಬಿಡುತ್ತಾರೆ. ಹುಡುಗಿಯರೆಲ್ಲರೂ ಲಗ್ನಮಾಡಿಕೊಳ್ಳಬಾರದೆಂದು ನನ್ನ ಮತವಲ್ಲ. ಆದರೆ ಲಗ್ನವು ಅನಾವಶ್ಯಕವೆಂದು ಯಾವ ಹುಡುಗಿಗೆ ತೋರುತ್ತದೋ ಅಂಥವಳಿಗೆ ವಿವಾಹವಿಲ್ಲದೇನೇ ಇರುವಂತೆ ಸಮಾಜವು ತಕ್ಕ ಪ್ರೋತ್ಸಾಹವನ್ನು ಕೊಡತಕ್ಕದ್ದು. ಮೊದಲೇ ಹುಡುಗಿಯರ ಸಂಖ್ಯೆ ಅಧಿಕವಾಗಿದೆ. ಹಾಗಿರುವಾಗ ವರನನ್ನು ಹುಡುಕುವುದು ಎಷ್ಟೋ ಕಷ್ಟ. ಅದರ ಮೇಲೆ ಪ್ರತಿಯೊಬ್ಬ ಹುಡುಗಿಗೂ ವಿವಾಹವಾಗಲೇ ಬೇಕೆಂದು ಇಟ್ಟುಕೊಂಡಲ್ಲಿ ಆ ತಂದೆಯವರ ಗತಿ ಏನಾಗಬೇಕು ?

ಕುಮುದ :—ವರದಕ್ಷಿಣೆಯ ಕಷ್ಟಕ್ಕಾಗಿಯೋ ಇಷ್ಟು ವೇದಾಂತ ?

ಶಿವ :—ಛೆ, ಛೆ, ಹಾಗೆಂದಿಗೂ ಅಲ್ಲ. ಇದು ನಿನ್ನ ಕಲ್ಪನೆ. ಶಾಸ್ತ್ರೋಕ್ತವಾದ ವರದಕ್ಷಿಣೆಯನ್ನು ಕೊಡಲಿಕ್ಕೆ ನಾನೋ ಹಿಂಜರಿಯುವವನು ?

ಕುಮುದ :—ತಂದೆಯರು ಹುಡುಗರ ಹರಾಜಿ ಬೀಟು * ಹೆಚ್ಚಿಸಿ ಬಿಟ್ಟಿದ್ದಾರಲ್ಲವೆ ಅಪ್ಪಾ ಇತ್ತೀಚಿಗೆ.

ಶಿವ:—ಕೇಳು. ಶಾಸ್ತ್ರ...ಅಲ್ಲ...ಪೂರ್ವಾಚಾರ ಅನ್ನುತ್ತಾರಲ್ಲಾ...ಅದನ್ನು ಬಿಟ್ಟರೆ ಬೇರೆಗತಿಯಿಲ್ಲ, ದಕ್ಷಿಣೆಕೊಡದೆ ದಾನವಾದರೂ ಹೇಗೆ ಸಫಲವಾದೀತು ? ಈ ತತ್ತ್ವವನ್ನು ತಿಳಿದಂಥವರು ಅದಕ್ಕಾಗಿಯೇ ವರದಕ್ಷಿಣೆಯೆಂದು ಇಟ್ಟುಕೊಂಡಿದ್ದಾರೆ. ಅದು ಹಾಗಿರಲಿ, ನಾನು ಏನು ಹೇಳುತ್ತಾಇದ್ದೆ......ಹುಡುಗಿಯರ ಸಂಖ್ಯೆ ಹೆಚ್ಚಾದುದರಿಂದ...(ಯೋಚಿಸುವನು)

[ವಿಮಲೆ–ಮೋಹನನ ಶಿಕ್ಷಣದಲ್ಲಿದ್ದ ಹತ್ತುಹನ್ನೆರಡು ವರುಷದ ಹುಡುಗಿ; ಕಮಲ–ಸಾಮಾನ್ಯಪದ್ಧತಿಗಳಲ್ಲಿ ಬೆಳೆದ ಏಳೆಂಟು ವರ್ಷದ ಹುಡುಗಿ; ಇಬ್ಬರೂ ಪ್ರವೇಶಿಸುತ್ತಾರೆ]

---

* ಯೊಲವ್ auction bid

ಕುಮುದ :—ಬನ್ನಿ–ಬಾ–ಕೂತುಕೊಳ್ಳಿ (ಸೇವಕನು ಕುರ್ಚಿ ತರುತ್ತಾನೆ) ಏನೇ ಈ ಹೊಸಬಳ್ಯಾರು ?

ವಿಮಲ :—ನಾನೋ ವಿಮಲ.

ಕುಮುದ :—ವಿಮಲೆಯೋ ಸರಿ–ಮೋಹನಮೂರ್ತಿ !

ಕಮಲ :—ಇವಳು ನಮ್ಮ ಚಿಕ್ಕಮ್ಮನ ಮಗಳು.

ವಿಮಲ :—ಇವಳು ನಮ್ಮ ಸೋದರತ್ತೆಯ ಮಗಳು–ಇನ್ನೇನು ಹೇಳಿದೆ ಅಕ್ಕಾ ! ಮೋಹನಮೂರ್ತಿಯೋ ಏನೋ ನೀನೇ ಬಲ್ಲೆ.

ಕುಮುದ :—ವಿಮಲಾ, ನೀನೆಲ್ಲಿಂದ ಬಂದೆ ? ಏಕೆ ಬಂದೆ ?

ವಿಮಲ :—ಮೋಹನನ ಧ್ಯಾನದಲ್ಲಿದ್ದೀಯಲ್ಲಾ ನೀನು ! ನನ್ನಣ್ಣನೇ ಮೋಹನ.

ಕುಮುದ :—ಓ ಇವಳೇನೋ ಕಾವ್ಯ ಹೇಳುತ್ತಾ ಇದ್ದಾಳೆ.

ಶಿವ :—ಓಹೋ ಇವಳು ನೀಲಕಂಠ ಶಾಸ್ತ್ರಿಯ ಸೊಸೆ ಇದ್ದಹಾಗೆ ಕಾಣುತ್ತದೆ. ಅವರಳಿಯ ಮೆಡಿಕಲ್ ಕಾಲೇಜಿನಲ್ಲಿ ಓದುತ್ತಾನಂತೆ. ಬಹಳ ಯೋಗ್ಯನೆಂಬ ವಾರ್ತೆ ಇದೆ.

ವಿಮಲ :—ಯೋಗ್ಯನೋ, ನನ್ನ ಅಣ್ಣನ ಯೋಗ್ಯತೆ... ಹೂಂ...

ಶಿವ :—ಅಣ್ಣನೆಂದರೆ ಈ ಹುಡುಗಿಗೆ ಜೀವ ಎಂದು ಕಾಣುತ್ತದೆ.

ವಿಮಲ :—ನಮ್ಮಣ್ಣ ಇದ್ದಾನೆ ಹಾಗೆ. ಅವನನ್ನು ಒಂದುಸರ್ತಿ ಕಂಡರೆ ಆದ ಸ್ನೇಹ ಬಿದ್ದ ಬ್ರಹ್ಮಗಂಟೇ. ಅಲ್ಲವೇನೆ ಕಮಲಾ !

ಕಮಲ :—ಅದರಲ್ಲೇನು ಸಂದೇಹ ! ನನ್ನ ತಂದೆಗಂತೂ ಮೋಹನ ಅಂದರೆ ಬಹಳ. ಅವನು ಇಷ್ಟರಲ್ಲೇ ಬರುತ್ತಾನೆ. ನಿಮ್ಮ ರಮೇಶಣ್ಣನಿಗೆ ಅವನು ಬಹಳ ಇಷ್ಟವಂತೆ. ಇಬ್ಬರೂ ಬರುತ್ತಾರಂತೆ.

ಕುಮುದ :—ಅಪ್ಪಾ...ಮೋಹನ ! ಈ ಹೆಸರು ನಿಮ್ಮ ರೂಢಿಗೆ ವಿರುದ್ಧವಾಗಿರಬಹುದಲ್ಲವೆ ?

ಶಿವ :—ಅದಕ್ಕಾಗಿಯೇ ನೀನು ಬೆರಗಾದೆಯೋ? ನಮ್ಮಲ್ಲಿ ಈ ಹೆಸರೇನೋ ವಿರುದ್ಧವೇ.

ಸುಬ್ಬ :—ರೂಢಿಗೆ ವಿರುದ್ಧವಾದ್ದೆಲ್ಲ ನಮ್ಮಾ ಅಮ್ಮನಿಗೆ ಅತಿ ಪ್ರಿಯ, ಬಹು ಪ್ರಿಯ.

ವಿಮಲ :—ಮೋಹನ--ಅದೇನೂ ನಮ್ಮಣ್ಣನ ನಿಜವಾದ ಹೆಸರಲ್ಲ. ಅವನ ಹೆಸರು ಆನಂದ. ಆದರೆ ಆವನ ಮುದ್ದು ಸ್ವಭಾವಕ್ಕಾಗಿ ಸ್ನೇಹಿತರು ಮೋಹನ ಎಂದು ಕರೆಯುವರು.

ಕುಮುದ :—ಓಹೋ ! ಈಗ ಶೃತಿಗೆ ಸೇರಿತು.

ಕಮಲ :—(ಕುಮುದೆಗೆ) ಅಕ್ಕ, ನಿಮ್ಮಣ್ಣ ಎಂದು ಬರುತ್ತಾನೆ ?

ವಿಮಲ :—(ತಾನಾಗಿ ಅಡ್ಡಿಮಾಡಿ) ರಮೇಶನೊಡನೆಯೇ ಮೋಹನ.

ಕಮಲ :—ಯಾವಾಗ ಬರುತ್ತಾನೆ ?

ಕುಮುದ :—ನನ್ನನ್ನೇಕೆ ಕೇಳುತ್ತೀ ಇದೆಲ್ಲಾ ? ನಮ್ಮಣ್ಣ ಬರುವಾಗ ಅವನು ಹೇಳಿ ಬರುತ್ತಾನೆಯೋ? ಮೊದಲೇನೋ ಬರುವ ಸುದ್ದಿಯೇ ಇಲ್ಲ. ಎಲ್ಲಿಯಾದರೂ ಹೊರಗೆಹೋದರೆ-ಅಲ್ಲೇ ನಮ್ಮಣ್ಣ. ಇದೇ ಯಾವಾಗಲೂ ನಡೆಯುವ ರೂಢಿ. ಆದರೆ ಒಂದು ಮಾತೇನೋ ನಿಶ್ಚಯ. ರಿಜಲ್ಟ್ ಬಂದಕೂಡಲೆ ಆತನು ಬಂದೇ ಬಿಡುತ್ತಾನೆ. ಅದು ತಿಳಿಯುವದೇನೋ ಈಹೊತ್ತೇ.

ವಿಮಲ :—ಹಾಗಾದರೆ ನಮ್ಮಣ್ಣ ನಾಳೆ ಬರುತ್ತಾನೆ.

ಕಮಲ :—(ಕುಮುದೆಗೆ) ನಿಮ್ಮಣ್ಣನೂ ನಾಳೆಯೇ ಬರುತ್ತಾನೆ (ಎಂದು ಸಂತೋಷವನ್ನು ತೋರಿಸುತ್ತಾಳೆ)

ಕುಮುದ:—ಇಷ್ಟು ಸಂತೋಷವೆ ಅದಕ್ಕೆ? ಯಾಕೇ......

ವಿಮಲ:—ಯಾಕೆ......ಅಂದರೇನೋ...... ನಾಲ್ಕು ಮಂದಿ ಎದುರಿಗೆ ಹೇಳುವ ಮಾತಲ್ಲ ಅದು.

ಕುಮುದ:—ಏನದು ?

ವಿಮಲ:—(ರಹಸ್ಯವಾಗಿ) ನಮ್ಮ ರಮೆಯ ಲಗ್ನ ರಮೇಶನೊಡನೆಯಂತೆ: ಇದೇ ನೋಡು, ಯಾರಿಗೂ ಹೇಳಬೇಡ.

ಕುಮುದ:—ಹೇಳಿದರೇನಿದರಲ್ಲಿ! ರಮೇಶನಿಗೆ ರಮೆಯೇ. ಸಾರ್ಥಕವೇ.

ಶಿವ:—ಏನು ರಮೇಶನಿಗೋ ಆ ಭಿಕಾರಿ ಹುಡುಗಿ? ಛೆ! ಛೆ!! ಎಲ್ಲಿ ರಮೆ ಎಲ್ಲಿ ರಮೇಶ? ಜೊತೆಯಿಲ್ಲ, ಜೋಡಿಯಿಲ್ಲ. ನಮ್ಮ ಹುಡುಗ ನಿಗೋ ನೂರಾರು ಹೂಮಾಲೆಗಳು ಕಾದಿವೆ. ಯಾವ ಹುಡುಗಿಯ ಪುಣ್ಯ ಹೇಗಿದೆಯೋ! ತಾಳಮೇಳವಿಲ್ಲದೆ ಮಾತಾಡಬೇಡ. ನನ್ನ ಹುಡುಗನಿಗೆ ಸುಶಿಕ್ಷಿತಳಾದ ಹುಡುಗಿ ಬೇಕು. ಗೊತ್ತಾಯಿತೇ?

ಸುಬ್ಬ:--ನಿಮ್ಮ ರಮೆಯೋ ಅದು, ಆಹಾಹಾ! ಮಯೂರಕಂಠಿ, ಜ್ವಾಲಾಮುಖಿ, ಮಂಡೂಕವಾಣಿ,.....

ವಿಮಲ:--(ಆತನ ಹಣೆಯಮೇಲಿನ ದೊಡ್ಡ ಬೊಟ್ಟನ್ನು ದಿಟ್ಟಿಸುತ್ತ) ಮುಕ್ಕಣ್ಣ ಜೋಕೆ!! ಸ್ವಲ್ಪನಿಧಾನ. ಆ ಹಣೆಯ ಮೇಲೆ ಇರು ವುದು ಏನದು? ತ್ರಿನೇತ್ರವೊ? ಹಾಗೇ ಇದೆ ಎಂದು ಕಾಣುತ್ತದೆ. ಇಲ್ಲವಾದರೆ ನಮ್ಮ ರಮೆಯ ಯೋಗ್ಯತೆ ಆಕೆಯನ್ನು ನೋಡದೆ ಕೇಳದೆ ನಿಮಗೆ ಹೇಗೆ ಗೊತ್ತು?

ಕಮಲಾ:—(ಕೈತೋರಿಸಿ) ಅಂ-ಹೋಗಿ, ಇಂಥಾ ಇಂಗ್ಲೀಷ್ ಪುಸ್ತಕ ಪಟಪಟಪಟ ಓದಿಬಿಡುತ್ತಾಳೆ—ಮೇಲೆ ಸಂಸ್ಕೃತ ಭಾಗವತವನ್ನೂ ಓದುತ್ತಾಳೆ. ಊಂ-ಗೊತ್ತೊ?

ಸುಬ್ಬ:—ಸರಿ ಬೆಳ್ಳಂ ಬೆಳಕೇ.

ಕಮಲ:—ನಿಮಗೇನು ಹೇಳಬೇಕು, (ವಿಮಲೆಗೆ) ನೋಡೇ (ಅಳುತ್ತ) ನಮ್ಮ ನಡುವೆ ಬಂದು ಒದರು ಎಂದು ಇವನಿಗೆ ಹೇಳಿದವರಾರು?

ಶಿವ:—ಅಳಬೇಡ ಹುಡುಗೀ......ಆದರೂ ಆಚಾರ್ಯರ ಮಾತು ಎಲ್ಲವೂ ತಪ್ಪಲ್ಲ. ನಿಮ್ಮರಮೆಗೆ ಅಕ್ಷರಗಳ ಶಬ್ದವಾದರೂ ಕಿವಿಗೆ ಬಿದ್ದಿದೆಯೋ ?

ಕುಮುದ:—ಅಯ್ಯೋ! ಎಂಥಾ ಅಜ್ಞಾನವಿದು. ಅಪ್ಪಾ, ನನಗೆ ಗೀತಾ ಕಾವ್ಯ ಮುಂತಾದುವುಗಳ ಅರ್ಥವನ್ನು ಹೇಳುವವಳೇ ಅವಳು, ಗೊತ್ತೋ? ಅರಿಯದೆ ತಿಳಿಯದೆ ಇನ್ನೊಬ್ಬರ ವಿಷಯವೇನಾದರೂ ಆಡಿಬಿಡುವುದೂ ಇದೆಯೆ ಎಲ್ಲಿಯಾದರೂ? (ಸ್ವ) ಇದೇನೋ ದೊಡ್ಡ ಮನುಷ್ಯರ ನಾಗರಿಕತೆ ಯೆಂದರೆ!

ಶಿವ:—ನೀನು ಸುಮ್ಮನಿರು. ಅವಳು ಒಂದು ದಿನವಾದರೂ ಕಾಲೇಜಿಗೆ ಹೋದದ್ದು ನನ್ನ ಕಣ್ಣಿಗೆ ಬೀಳಲಿಲ್ಲ!

ಕುಮುದ:—ವಿದ್ಯೆಯನ್ನು ಕಾಲೇಜಿನಲ್ಲೇ ಹುಡುಕಬೇಕೇ?

**ಇದೊಂದು ಹೊಸ ಭ್ರಮೆ.** ಅವಳ ತಂದೆಯು ಪ್ರೀತಿಯಿಂದ ಹೇಳಿಕೊಟ್ಟ ವಿದ್ಯೆಗೆ ಸಮಾನ ಕಾಲೇಜಿನ ವಿದ್ಯೆಯೋ? ಸರಿ. ಆಕಳ ಹಾಲೂ ಆಲದ ಹಾಲೂ ಎರಡೂ ಒಂದೇನೋ? ನನ್ನಂತೆ ಕಾಲೇಜಿಗೆ ಹೋಗದೆ ಇದ್ದ ಪಕ್ಷಕ್ಕೂ ಬಿ ಎ.ಗಳಿಗೆ ನೀರು ಕುಡಿಸುವ ಯೋಗ್ಯತೆ ಅವಳಿಗಿದೆ. ಆರು ಹುಡುಗಿಯರ ಲಗ್ನ ಸಮಾರಂಭ ಸಂಕಟದಿಂದ-ಪಾಪ-ನೀಲಕಂಠ ಶಾಸ್ತ್ರಿಗಳ ಕೆಲಸ ಮುಣುಗಿತು. "ಅಳಿಯ ಮನೆ ತೊಳಿಯ" ಅಂದಂತೆ ಮನೆ ಹಾಳಾಯಿತು. ಮೇಲೆ ಅಂಥಾ ಅಳಿಯಂದಿರಿಗೆ ಬಲಿ ಕೊಡುವದಕ್ಕಾಗಿ ಈ ಏಳನೇ ಹುಡುಗಿಗೂ ಕಾಲೇಜಿನ ಖರ್ಚು ಇಟ್ಟುಕೊಳ್ಳುವುದು ಹೇಗೆ ಸಾಧ್ಯ?

ಶಿವ:—(ನಿಟ್ಟುಸಿರುಬಿಡುತ್ತ) ಹೌದು ಪಾಪ! ಈ ಅಳಿಯಂದಿರಿಂದ ಎಷ್ಟು ಮನೆಗಳು ಹಾಳಾದವು! ಮುಂದೆಯೂ ಹೀಗೇ ನಡೆದರೆ ಎಷ್ಟು

ಮನೆಗಳು ಮಸಣವಾಗುತ್ತವೋ ಆ ದೇವರೇ ಬಲ್ಲ! ಆದರೆ ಏನು ಮಾಡುವುದು? ನಮ್ಮ ಹಿಂದೂ ಧರ್ಮವನ್ನು ಬಿಡುವುದು ಸಾಧ್ಯವೇ? (ಆಕಳಿಸುತ್ತ) ಹರಹರಾ, ಕಠಿಣವಪ್ಪಾ ಈ ಧರ್ಮದ ಆಜ್ಞೆ. ಆ ಧರ್ಮದ ಪಾಪ ಎಲ್ಲಿ ತಟ್ಟುತ್ತದೋ ಎಂಬೀ ಭೀತಿ ನನ್ನ ತಲೆಯಲ್ಲಿ ಚಿಕ್ಕಂದಿನಿಂದ ಹೊಕ್ಕಿದ್ದಿಲ್ಲನಾದರೆ......ಇಂಥ ಕ್ರೂರ ಧರ್ಮ ಶಾಸ್ತ್ರಗಳಿಗೆ ಎಂದೋ ಕಡ್ಡಿ ಗೀಚಿ ಹಚ್ಚಿಬಿಡುತ್ತಿದ್ದೆ.

ಕುಮುದ:—ಇಷ್ಟು ಮಾತೇಕೆ? ವರದಕ್ಷಿಣೆ ತೆಗೆದುಕೊಳ್ಳಲಿಕ್ಕೆ ಅನುಕೂಲವಾದ ಶಾಸ್ತ್ರಾಧಾರವಲ್ಲವೆ ಬೇಕಾದ್ದು? ಏನಪ್ಪಾ.

ಶಿವ:—ಎರಡು ಮಾರ್ಗಗಳೂ ಒಂದೇ-ಬಲು ಬಿಕ್ಕಟ್ಟು-ಮಗೂ,

ಕುಮುದ·—ನಿಜವೇ! ಠಣಾಠಣ್‌ನೆ ಕಲ್ಲಮೇಲೆ ಹೊಡೆದು ತಕ್ಕೊಳ್ಳುವಾಗ ಎಣಿಸುತ್ತಾ ಎಣಿಸುತ್ತಾ ಪಾಪ ಮಾವನಿಗೆ ಜ್ವರವೇ ಬರುತ್ತದೇನೋ? ಸಾವಿರಾರು ರೂಪಾಯಿ ಚೀಲಗಳು ಬಿಚ್ಚಿ ಬಿಚ್ಚಿ ಸುರಿಯುವಾಗ ಹುಡುಗಿಯ ತಂದೆಯ ಪ್ರಾಣವು ಮಾತ್ರ ಹ್ಯಾಗಾಗುತ್ತದೋ-ದೇವರೇ ಬಲ್ಲ.

ಶಿವ:—ಅದಕ್ಕೆಲ್ಲಾ ಅನುಭವಬೇಕು ಮಗೂ ಸುಮ್ಮನಿರು. ಈ ಕಷ್ಟಗಳೆಲ್ಲಾ ನನಗೇ ಬರುವಂತಿವೆ. ಆಗ ನೋಡು ಪ್ರಾಣ ಹ್ಯಾಗಾಗುತ್ತದೋ ನಿನಗೇ ತಿಳಿದು ಬರುವುದು.

ಕುಮುದ:—ನೋಡಬೇಕಾದ್ದೇ, ಇರಲಿ. ಕಮಲಾ, ನೀನು ಬಂದ ಕೆಲಸವೇನು? ಹೇಳು ಸರಿಯಾಗಿ ಮತ್ತೊಮ್ಮೆ.

ಕಮಲ:—(ಕಿವಿಯಲ್ಲಿ ಗೊಣಗುಟ್ಟುತ್ತ) ರಮೆಯು ನಿನಗಿಷ್ಟು ಹೇಳು ಎಂದು ನನ್ನನ್ನು ಕಳಿಸಿದ್ದಾಳೆ.

[ ತಂತಿ ಜವಾನನು:--(ಹೊರಗೆ) ಶಿವರಾವ್ ವಕೀಲ್-ಜಮೀನ್‌ದಾರರು ಮನೆಯಲ್ಲಿದ್ದಾರೋ? ]

[ ಜವಾನನ ಪ್ರವೇಶ. ]

ಕುಮುದ:—ಅಪ್ಪಾ ಅಣ್ಣಾ ಪಾಸಾಗಿದ್ದಾನೆಂದು ತೋರುತ್ತದೆ.

**ತಂತಿಯನ್ನು ತೆಗೆದುಕೊಳ್ಳುತ್ತಾಳೆ.**

ಶಿವ:—ಪ್ಯಾಸ್ ಆಗಿಯೇ ತೀರಬೇಕು. ಸಂದೇಹವೇನು?

ಕುಮುದ:—ಪಾಸ್ಡ್ ಫಸ್ಟ್ ಕ್ಲಾಸ್, ಕಮಿಂಗ್ ಟುಮಾರೋ ಮೈಲ್ *

ವಿಮಲ:—ನಾಳೇ ಬರುತ್ತಾರೇ? ಓ! ನನ್ನ ಅಣ್ಣನೂ ನಾಳೆಯೇ ಬರಲೇ ಬೇಕು.

ಶಿವ:—ವಾಃ! ಈ ಹುಡುಗಿಗೂ ಇಂಗ್ಲೀಷ್ ಬರುತ್ತದೆ! ಹುಷಾರಾಗಿದ್ದಾಳೆ-ರಮೇಶನೂ ನಾಳೆ ಬರುತ್ತಾನೋ? (ಸ್ವ) ಹುಂ-ಅಷ್ಟರೊಳಗೆ ಏನಾದರೂ ಒಂದು ನಿರ್ಧಾರಮಾಡುವಂತೆ ಬರೆಯಬೇಕು. (ಪ್ರ) ಆಚಾರ್ಯರೇ ಕೇಳಿ. ಕಾಗದ ಹಾಕಿ—"ರಮೇಶ ಪ್ಯಾಸ್-ಮೇಲೆ ಫಸ್ಟ್‌ಕ್ಲಾಸ್"-ಉತ್ತರ ಬರೆಯುವಾಗ ಇದನ್ನೆಲ್ಲಾ ಯೋಚಿಸಬೇಕು ಎಂತ ಒಂದು ಸೂಚನೆ ಇದ್ದುಬಿಡಲಿ. "ನಿಮ್ಮ ಉತ್ತರವನ್ನು ಕಂಡಮೇಲೆ ಹುಡುಗಿಯನ್ನು ನೋಡಲಿಕ್ಕೆ ರಮೇಶನನ್ನು ಕಳುಹಿಸುತ್ತೇನೆ" ಎಂದು ತಿಳಿಸಿ. ಕುಮುದಾ! ಈಗ ಸ್ವಲ್ಪ ವಾಕಿಂಗ್‌ಗೆ ‡ ಹೋಗಿ ಬರುತ್ತೇವೆ. ವ್ಯರ್ಥವಾಗಿ ತಂತೀ ಹಾದಿ ನೋಡಿ ಕೂತೆ. ಮುಂಜಾನೆ ಸೂರ್ಯೋದಯವಾಗುತ್ತೋ ಇಲ್ಲವೋ ಎಂದು ಪಂಚಾಂಗವನ್ನು ನೋಡಿ ಕೂತಂತಾಯಿತು. (ನಗುತ್ತಾನೆ) ಆದರೂ ಮನಸ್ಸಿಲ್ಲವೆ? ಹಾಳಾದ್ದು......[ಶಿವರಾವ್ ಬಟ್ಟೆಯನ್ನು ತೊಟ್ಟು ಹೋಗುತ್ತಾನೆ. ಆಚಾರ್ಯರು ಹಿಂದೆಯೇ ಹೋಗುತ್ತಾರೆ.]

---

* Passed first class coming tomorrow mail

‡ Walking, ಆರೋಗ್ಯಾರ್ಥ ಸ್ವಚ್ಛಗಾಳಿಯುಳ್ಳ ಪ್ರದೇಶದಲ್ಲಿ ನಡೆಯುವುದು: ವಿಹಾರ.

ಕುಮುದ:—ಉಂ-ಕಮಲಾ ಹೇಳು ಇಸ್ನೊಮ್ಮೆ ಏನು ಹೇಳುತ್ತೀಯಾ ಈಗ ?

ಕಮಲ:—(ರಹಸ್ಯವಾಗಿ) ರಮೆಯು ನಿನ್ನ ಸೀರೆಯನ್ನೂ ಕುಪ್ಪಸವನ್ನೂ ತಕ್ಕೊಂಡು ಬಾ ಎಂದು ಹೇಳಿದ್ದಾಳೆ.

ಕುಮುದ:—ಯಾಕೆ ?

ಕಮಲ:—ನಾಳೆ ಅವಳನ್ನು ನೋಡಲಿಕ್ಕೆ ಬರುತ್ತಾರಂತೆ.

ಕುಮುದ:—ಯಾರೇ ಅದು ?

ಕಮಲ:—ಅವಳನ್ನು ನೋಡಲಿಕ್ಕೆ ಪಶು......(ಪಶು ಚಿಕಿತ್ಸಕ ಅನ್ನಲಾರದೆ) ಇನ್ನೇನೋ ಅಂತೆ, ಯಾರೋ ಬರುತ್ತಾರಂತೆ.

ವಿಮಲ:—ಅಂದರೆ ಪಶುವೈದ್ಯರು. ಆಕೆಗೆ ಹೇಳಲಿಕ್ಕೆ ಬರುವುದಿಲ್ಲ.

ಕುಮುದ:—ಎಷ್ಟೋ ಪಶುಗಳು ಈವರೆಗೆ ಕಂಡು ಪರೀಕ್ಷೆಮಾಡಿ ಹೋದರಲ್ಲವೇನೆ ? ಈ ಪಶು ಈಗ ಎಲ್ಲಿಂದ ಬಂತು ಮತ್ತೆ ?

ವಿಮಲ:—ಹಾಗಲ್ಲ. ಅವರು ಪಶುಗಳಿಗೆ ಡಾಕ್ಟರ್ ಅಂತೆ. ನಮ್ಮಣ್ಣ ಅವರನ್ನು "ಪಶೂ" ಎಂದೂ ಕರೆಯುತ್ತಾನೆ. ಹೀಗೇ-ಕೀಟಲೆ.

ಕುಮುದ:—ಇದು "ನೋಡುವುದು" "ನೋಡಲಿಕ್ಕೆ ಬರುವುದು" ಅನ್ನುತ್ತಾರಲ್ಲಾ-ಅದೇನು, ಎಂದು ನಾನೂ ಒಮ್ಮೆ ನೋಡಬೇಕು. ನಾಳೆ ಆ ಪಶುಗಳು—ಅಲ್ಲ "ಪಶೂ" ಮತ್ತು ಅವರ ಕಡೆಯವರು ಪಸಂದು ಮಾಡಲಿಕ್ಕೆ ಬಂದಕಾಲದಲ್ಲಿ ನನಗೆ ಸ್ವಲ್ಪ ಹೇಳಿಕಳಿಸುತ್ತೀಯೇನೇ ?

ವಿಮಲೆ:—ಹೋ. ನೋಡು ನೀನು ಬಂದರೆ ಉತ್ತಮವೇ. ಯಾಕಂದರೆ ರಮೆಗೆ ಕೂದಲು ಬಾಚಿಕೊಂಡು ಸೊಗಸಾಗಿ ಕಟ್ಟಲಿಕ್ಕೆ ಬರುವುದೇ ಇಲ್ಲ. ಈ ಹೊತ್ತು ಎರಡು ತಾಸು ಕೂತು ಕೂದಲು ಕಟ್ಟಿದ್ದೇ ಕಟ್ಟಿದ್ದು, ಜಡೆಯೇನೋ ಬೀಳಲೇ ಇಲ್ಲ.

ಕುಮುದ:—ಒಂದು ತಾಸು ಮುಂಚಿತವಾಗಿಯೇ ತಿಳಿಸಿಬಿಡು. ರಮೆಯೊಬ್ಬಳ ಜಡೆಯೇ ಯಾಕೆ-ನಿನ್ನದು-ಕಮಲೆಯುದು ಅವಳ ತಾಯಿಯುದು, ಎಲ್ಲರ ಜಡೆಯುನ್ನೂ ಹೆಣೆದುಬಿಡುತ್ತೇನೆ-ನೋಡು. ಬಾ, ಸೀರೆ ಮತ್ತು ಕುಪ್ಪಸ ತಕ್ಕೊಂಡು ಹೋಗು.

[ಅವರನ್ನು ಮುಂದೆ ನಡೆಸಿಕೊಂಡು ಹೋಗುತ್ತ ಅವರು ಒಳಗೆ ಹೋದೊಡನೆಯೇ]

(ಸ್ವ) ಸೀರೆ ಕುಪ್ಪಸ ಒಡವೆ ಇವುಗಳನ್ನೆಲ್ಲ ಕಡ ತಂದಿಟ್ಟುಕೊಂಡು ಮದುವೆಯನ್ನು ನಡೆಸಬೇಕೇ! ಹೀಗೇ ಇನ್ನೆಷ್ಟು ಧರ್ಮಗಳೋ ನಮ್ಮಲ್ಲಿ!

[ಪರದೆಯು ಬೀಳುತ್ತದೆ]

## ಅಂಕ ೧. ದೃಶ್ಯ ೨.

(ಬೆಂಗಳೂರಿನ ಒಂದು ಬೀದಿ. ಸುಬ್ಬಣ್ಣಚಾರ್ಯರು ಮತ್ತು ನೀಲಕಂಠ ಶಾಸ್ತ್ರಿಗಳು ಬರುತ್ತಾರೆ.)

ಸುಬ್ಬ:—ಮೊದ್ದು ಬುದ್ಧಿ ಸ್ವಾಮಿ ನಿಮ್ಮದು. ಅಲ್ಲಾ ಶಿವರಾಯರೆಲ್ಲಿ? ನೀವೆಲ್ಲಿ? ಎಲ್ಲಿ ಇಂದ್ರನ ಐರಾವತ (ಸ್ವ) ಎಲ್ಲಿ ಗೊಲ್ಲರ ಕೋಣ? (ಪ್ರ) ಏನಾದರೂ ತಾಳಮೇಳವಿರುವಹಾಗೆ ಮಾತಾಡಬೇಕಲ್ಲವೆ! ನಮ್ಮ ರಾಯರು ಇಂಥಾ ಮಾತನ್ನು ನನ್ನ ಬಾಯಿಂದ ಕೇಳಿದರೆ ಆಗಲೇ ಹೊರಡಿಸಿಬಿಟ್ಟಾರು.

ನೀಲ;—(ಅಡಚಣೆಯಿಂದ ಬಾಯಿ ನಿಂತು) ನೀವನ್ನುವದೇನೋ ಸಹಜ. ಆದರೆ ಒತ್ತಾಯಕ್ಕೆ ಬಲಿಬಿದ್ದವನಿಗೆ ಚಿತ್ತ ಭ್ರಮೆಯೇ ನೊತ್ತಂತೆ. ಬುದ್ಧಿ ವಿಚಾರ ಗಿಚಾರ ಎಲ್ಲಿಂದ ಬರಬೇಕು. ಆರು ಹುಡುಗಿಯರ ಲಗ್ನದಿಂದ ಮನೆ ಮಾರಾಟವಾಗಿಹೋಯಿತು. ಸಾಲವಾಯಿತು. ಅದಕ್ಕಾಗಿ ಇದ್ದ ಚಿಕ್ಕ ಪುಟ್ಟ ಕೆಲಸಹೋಯಿತು. ಹಿಂದೆ ಮುಂದೆ ಗತಿಯೇ ಇಲ್ಲದಂತಾಯಿತು. ಇದು ಏಳನೆಯ ಲಗ್ನ. ಇದಕ್ಕೂ

ದುಡ್ಡು ತರಬೇಕು—ಅಂದರೆ—ಎಲ್ಲಿಂದ ತರಬೇಕು ? ದುಡ್ಡು. ಬಟ್ಟೆ, ಒಡವೆ, ಅದೇಕೆ ಬುದ್ಧಿ ಜ್ಞಾಪಕ ಇವು ಕೂಡ ನನ್ನಲ್ಲಿಲ್ಲ. ಲಗ್ನವೇನೋ ಆಗಬೇಕು. ಇಬ್ಬರ ಲಗ್ನವಾಗಬೇಕು ಇನ್ನೂ, ಆ ಚಿಕ್ಕವಳ ಚಿಂತೆಯಿಲ್ಲ, ಬಿಡಿ. ನನ್ನ ಅಳಿಯ ಡಾಕ್ಟರನಾಗಿ ಬಂದಿದ್ದಾನೆ. ಅವಳ ಲಗ್ನಮಾಡುವ ಭಾರವನ್ನು ಅವನು ವಹಿಸಿ ಕೊಂಡಿದ್ದಾನೆ. ಅದಿರಲಿ, ಈ ಹುಡುಗಿಯ ಗತಿಯೇನು ! ಅದು ಬೇಕು, ಇದು ಬೇಕು ಎಂದರೆ ಎಲ್ಲಿಂದ ತರಬೇಕು ! ಮೋಹನ-ಪಾಪ-ಮೊನ್ನೆಯೇ ಕೆಲಸಮಾಡಲಿಕ್ಕೆ ಪ್ರಾರಂಭಿಸಿದ್ದಾನೆ. ಇಲ್ಲವಾದರೆ ಆ ಹುಡುಗ, ಆ ದಯಾರ್ದ್ರಹೃದಯ ಮೋಹನ, ಈಗಲೇ ಕೈವಾರಿಯಾಗಿ ಬರುತ್ತಿದ್ದನು. ಏನು ಆಚಾರ್ಯರೆ ಇದು-ವರ ದಕ್ಷಿಣೆ ಲಗ್ನದ ಖರ್ಚು, ಜವುಳಿ, ಉಡುಗರೆ-ಅಬ್ಬಬ್ಬಾ ಈ ವಾಯು ದೇವನ ಬಾಲ ಹಿಡಿಯುವದೆಂದರೆ ವಾಯುವನ್ನು ಕಟ್ಟಿಹಾಕುವ ಕೆಲಸವೇ !

ಸುಬ್ಬ:—(ಸ್ವ) ಅದೂ ಒಂದು ಸಂಕಟವೆ ? (ಪ್ರ) ನೀವೇ ಹೇಳಿ ? ಶಿವ ರಾಯರ ಸಂಬಂಧವಾಗಬೇಕಾದರೆ-ಏನು ಪುಗಸಾಟೆ ಕೆಲಸವೇ ? ಈವಾಗಲೇ ಆ ಯಾರೋ ದೊಡ್ಡ ಜಮೀನದಾರನು ೨೫೦೦ ರೂ. ಕೊಡಲಿಕ್ಕೆ ಸಿದ್ಧನಾಗಿದ್ದಾನೆಂಬ ವಾರ್ತೆ ಪತ್ರಮೂಲಕವಾಗಿ ಬಂತು, ನಮ್ಮ ರಾಯರೋ ೫೦೦೦ ರೂ. ಎಂದು ಪಟ್ಟು ಹಿಡಿದು ಹಲ್ಲು ಕಚ್ಚಿ ಕೂತಿದ್ದಾರೆ. ಅಷ್ಟಕ್ಕೇನಾಗುತ್ತದಯ್ಯಾ ? ರಮೇಶರಾಯ ರೋ ಫಸ್ಟ್‌ಕ್ಲಾಸ್ ಬಿ. ಎ. ಪ್ಯಾಸ್ ಆದರೆಂದು ಈ ಹೊತ್ತು ತಂತಿ ಬಂತು ! ಅಂದಮೇಲೆ ಈಗ...ಆ...ಆ...ಫಸ್ಟ್‌ಕ್ಲಾಸ್‌ನ ಬೆಲೆಯೂ ಬರಬೇಕೋ ಬೇಡವೋ ?

ನೀಲ;—(ಖಿನ್ನವಾಗಿ) ಪಾಸೊ !......ಫಸ್ಟ್‌ಕ್ಲಾಸ್ !!

ಸುಬ್ಬ:—ಅವಲಕ್ಷಣವಾಗಿ ತೋರುತ್ತದೋ ನೀಮಗೀ ಪ್ಯಾಸು ! ಭವ್ಯನಾದ ಹುಡುಗನಯ್ಯಾ. ಮೇಲೆ ದಿವ್ಯನಾದ ದಿಗ್ವಿಜಯ ! ಇದೆಲ್ಲ ಚಿಂತೆಗೆ ಮೂಲವೋ ?

ನೀಲ:—ಸುಳ್ಳೇಕೆ ಹೇಳಬೇಕು-ಚಿಂತೆಯಾಯಿತೇನೋ ನಿಜ, ಆದರೆ ಅದು ದಾರಿದ್ರ್ಯದ ಪ್ರಭಾವ. ನನ್ನ ಸ್ವಭಾವವಲ್ಲ. ಸಮಾಜದ ಅನ್ಯಾಯ ಕಾರ್ಯಗಳಿಂದ ಹಾಳಾದ ಮಾವಂದಿರು ಬೇಡಬೇಡ ವೆಂದರೂ ಅಳಿಯನಿಗಾಗಿ ಕೋರುವ ಹಿತಚಿಂತನವು ಇಷ್ಟೇ? ಅಳಿಯ ಮುಂದಕ್ಕೆ ಬಂದ ಹಾಗೆಲ್ಲಾ ಅತ್ತೆಮಾವಂದಿರ ಸುಖಶಾಂತಿ ಗಳು ಅಳಿದು ಹಿಂದಕ್ಕೆ ಸರಿಯಲೇಬೇಕು. ತನ್ನ ಹೊಟ್ಟೆಯ ಕರು ಳಾದ ಹುಡುಗಿಯ ಸೌಭಾಗ್ಯಕ್ಕಾಗಿ-ಅಳಿಯನ ಸುಖವನ್ನು ಕೋರ ಬೇಕು. ದುಡ್ಡು ಎಳೆಯುವ ಅವನ ದೌಷ್ಟ್ಯಕ್ಕಾಗಿ ತಡೆಯಲಾರದೆ ಅವನನ್ನು ಶಪಿಸುತ್ತ ಇರಬೇಕು. ಅಯ್ಯಯ್ಯೋ- ಎಂತಹ ಒಗಟು ಈ ಲಗ್ನ! ಬಿಚ್ಚಲಾರದ ಗಂಟು ! ಹಾಕುವಾಗ ಗೋಳು, ಹಾಕಿದ ಮೇಲೆ ತವರುಮನೆ ಹಾಳು-ಮುಂದೆ ವಧೂವರರ ಬಾಳು...... ಹ್ಯಾಗೋ-ಯಾರೂ ಊಹಿಸಬಹುದು ! ಧರ್ಮವಂತೆ-ಇದೂ ಒಂದು ಧರ್ಮವಂತೆ ! ಹುಡುಗಿ ಹುಟ್ಟಿದ ಮನೆಯೇ ಹಾಳಾಗ ಬೇಕೋ ! ಇದೂ ಒಂದು ಧರ್ಮವೋ ! ಸಾಕಪ್ಪಾ ಸಾಕು. ಆದರೆ......ರೂಢಿ, ರೂಢಿ, ಏನುಮಾಡಬೇಕು ?

ಸುಬ್ಬ:—ವಾಃ ! ರಮೇಶರಾಯರು "ಫೇಲ್" ಆದರೆ ನಿಮಗೆ ಲಾಭವೋ!

ನೀಲ:—ಲಾಭ ! ನಿಸ್ಸಂದೇಹವಾಗಿ ಲಾಭವೇ! ಈಗ ಬಿ. ಎ. ಮೇಲೆ "ಫಸ್ಟ್ ಕ್ಲಾಸ್" ಬಂದು ಅಲ್ಲವೇ ಇಷ್ಟು ಹೆಚ್ಚಿದ್ದು ?

ಸುಬ್ಬ:—ಅದು ಹೇಗೆ ? ನೀಚ ಬಹು ನೀಚವಾದ ಮನಸ್ಸಯ್ಯ ನಿಮ್ಮದು.

ನೀಲ:—ಮನುಷ್ಯನ ರಕ್ತದಲ್ಲಿ ಮಿತಿಯಿಲ್ಲದ ದುರ್ಗುಣಗಳನ್ನು ತುಂಬಿ ಸುವುದು ಈ ದಾರಿದ್ರ್ಯ ಮಹಾಸ್ವಾಮಿ; ಮತ್ತು ಆ ದಾರಿದ್ರ್ಯವೇ ಬೇರೆಯವರ-ಮುಖ್ಯವಾಗಿ-ಆದ ಮತ್ತು ಆಗುವ ಅಳಿಯಂದಿರ-ಅಹಿತವನ್ನು ಕೋರುವಂತೆ ಮಾಡುವುದು......ಆ ಫೇಲ್ ಆದರೆ ವರದಕ್ಷಿಣೆಯೂ ಇಳಿಯಬೇಕಲ್ಲವೆ ?

ಸುಬ್ಬ:—ಒಂದು ಪರೀಕ್ಷೆಯಲ್ಲಿ ಡುಪ್‌ಕಿಹೊಡೆದರೆ ಹುಡುಗನ ಬೆಲೆ ಕಡಿಮೆ ಆಗುತ್ತದೇನಯ್ಯ ಎಲ್ಲಿಯಾದರೂ ? ಹುಡುಗನು ಹುಡು

ಗನೇ ಅವನ ಮೇಲೆ ಮೊದಲು ಹಾಕಿದ ಅಂಕೆಯೇ ಗಟ್ಟಿ ಯಾವಾಗಲೂ.

ನೀಲ :—ಅದೆಲ್ಲಾ ಇರಲಿ. ಆಚಾರ್ಯರೇ ಲೆಕ್ಕಪಕ್ಕ ಪಾಸುಗೀಸು ಅಲ್ಲಿರಲಿ-ಈ ಬಡವನಿಗೆ ನೀವು ನೆರವಾದರೆ ನಿಮ್ಮ ಉಪಕಾರವನ್ನು ನಾನೆಂದಿಗೂ ಮರೆಯಲಿಕ್ಕಿಲ್ಲ.

ಸುಬ್ಬ :—ಹಾಗೆ...ಹಾದಿಗೆ ಬನ್ನಿ ; ಆದರೆ...ನನಗೇನು ಕೊಡುತ್ತೀರಿ ಹೇಳಿ.

ನೀಲ :—ದಾರಿದ್ರ್ಯವೇ ನನ್ನ ವೈಭವ. ಇದನ್ನು ಮೊದಲೇ ಹೇಳಿದ್ದೇ ನಷ್ಟೆ ನಿಮಗೆ.

ಸುಬ್ಬ :—ಏನು ! ದಾರಿದ್ರ್ಯವನ್ನೇ ನನಗೆ ಕೊಡುತ್ತಿರೋ ? ಒಳ್ಳೆಯ ಪ್ರತ್ಯುಪಕಾರ !

ನೀಲ :—ನಿಮಗೆ ಕೊಡಲಿಕ್ಕೆ ನನ್ನಲ್ಲೇನಿದೆ ಸ್ವಾಮೀ—ಕೆಲವು ಕಡೆ ಓದಿ ಸುವುದರಿಂದ ತಕ್ಕಮಟ್ಟಿಗೆ ಕೈಬಾಯಿಗಾದರೂ ಗಂಟುಬೀಳುತ್ತದೆ. ಇಲ್ಲವಾದರೆ ಭಿಕ್ಷಾಪಾತ್ರವೇ ಗತಿ.

ಸುಬ್ಬ :—(ನಿಂದಿಸುತ್ತ) ಹಾಗಾದರೆ ಹುಡುಗಿಯ ಲಗ್ನವಾದಂತೇ ಇದೆ. ಆಕೆಗೆಷ್ಟನೆ ವರ್ಷ ಇದು ?

ನೀಲ :—(ಬಹು ದುಃಖಿತನಾಗಿ) ಹದಿಮೂರು ಎಂದು ಮೂರು ವರ್ಷ ಗಳಿಂದ ಹೇಳುತ್ತಾ ಇದ್ದೇನೆ. ಏನು ಮಾಡಲಿ ?

ಸುಬ್ಬ :—ಇದು ೧೭ನೆಯ ವರುಷವೊ! ನನ್ನ ಮೊದಲನೇ ಎರಡನೇ ಹೆಂಡಂದಿರಿಗೆ ೧೭ನೇ ವರುಷದೊಳಗೇ ಮೂರು ನಾಲ್ಕೈದು ಮಕ್ಕಳು ಹುಟ್ಟಿ ಅವೂ ಸತ್ತು, ಅವರೂ ಸತ್ತರು. ಈಗ ಮೊನ್ನೆ ಮೊನ್ನೆ "ಆಚಾರ್ಯರೆ, ಕೇಳಿ, ನಿಮಗಿನ್ನೂ ವಯಸ್ಸು ಮೀರಲಿಲ್ಲ. ಹೆಂಡತಿಯಿಲ್ಲದೆ ಸಾಯುವುದು, ಬ್ರಾಹ್ಮಣರಿಗೆ ಸರಿಯಲ್ಲ. ಎಲ್ಲಾ

ಧರ್ಮಕಾರ್ಯಗಳಲ್ಲಿಯೂ ದಂಪತಿಗಳು ಕೂಡಿಕೊಂಡಿರಬೇಕು. ಐವತ್ತು ವರುಷಕ್ಕೆ ವರನಾಗುವ ಯೋಗ್ಯತೆಯು ಹೋಗಿಬಿಡುತ್ತದೆಯೆ ಎಲ್ಲಿಯಾದರೂ? ಮಾಡಿಕೊಳ್ಳಿ ಮಾಡಿಕೊಳ್ಳಿ"--ಎಂದು ದೊಡ್ಡ ದೊಡ್ಡವರು ಒತ್ತಾಯ ಮಾಡಿದ್ದಕ್ಕೆ ಮೂರನೆಯಾಕೆಯನ್ನು ಮಾಡಿಕೊಂಡಿದ್ದೇನೆ. (ಬೇಜಾರದಿಂದ) ಇನ್ನೂ ಚಿಕ್ಕವಳಂತೆ. ಮನೆಗೆ ಬರಲಿಕ್ಕಿನ್ನೂ ಸರಿಯಾಗಿ......

ನೀಲ:—(ಅಡ್ಡಬಂದು) ಅದು ಹಾಗಿರಲಿ, ಸ್ವಲ್ಪ ದಯೆ ಹುಟ್ಟುತ್ತದೋ ನನ್ನ ಮೇಲೆ. ಈ ಕನ್ಯಾದಾನದ ಪುಣ್ಯ ನಿಮಗೆ ಬರುತ್ತದೆ. ಕನ್ಯಾದಾನವೆಂಬದು ಮೋಕ್ಷಕ್ಕೆ ಸುಲಭಮಾರ್ಗವೆಂಬುದನ್ನು ನಿಮ್ಮಂಥ ಆಚಾರ್ಯರಿಂದಲೇ ಕೇಳಿದ್ದೇನೆ.

ಸುಬ್ಬ:—ಕನ್ಯಾದಾನ ಫಲ! ಏರಂಡ ಫಲ! ಪಾಪಾಸುಕಳ್ಳಿಯ ಹಣ್ಣು! ನಿಮಗೆ ಬಾರದ್ದು ನಮಗಾದರೂ ಎಲ್ಲಿಂದ ಬಂದೀತಯ್ಯಾ? ಆರು ಹುಡುಗಿಯರ ಮದುವೆಯಿಂದ ಬಂದ ಪುಣ್ಯದಿಂದ ನಿಮ್ಮ ಮನೆಯೇ ದಿವಾಳಿಯಾಯಿತು. ಆ ಪುಣ್ಯ ನಿಮಗೇ ಇರಲಿ.

ನೀಲ: --ಏನು ಮಾಡಲಿ ಮತ್ತೆ? ನೀವೇ ಹೇಳಿ.

ಸುಬ್ಬ: --ಆಂ...ಹಾಗೆ ಬನ್ನಿ ಹಾದಿಗೆ. ಅಲ್ಲ...ಎರಡನೇ ಲಗ್ನಕ್ಕೆ ನಿಮ್ಮ ಹುಡುಗಿಯನ್ನು ಕೊಡುತ್ತೀರೋ? ಒಳ್ಳೆ ಅನುಕೂಲ ಮಾಡಿಕೊಡುತ್ತೇನೆ ನೋಡಿ.

ನೀಲ:--ಅವರ ವಯಸ್ಸೇನು?

ಸುಬ್ಬ:--ಸರಿ—ಆಗಲೇ ವಯಸ್ಸು ಕೇಳಲಿಕ್ಕೆ ಪ್ರಾರಂಭವೋ? ಲಗ್ನವಾಗುವುದೋ ಇಲ್ಲವೋ ಎಂಬ ಘನ ವಿಚಾರವನ್ನೇ ಬಿಟ್ಟುಬಿಟ್ಟಿರಿ. ಕೇಳಿ,

ಇದೆಲ್ಲ ಈಗಿನವರ ಚಾಳಿ.

ನಮ್ಮ ನೆರೆಮನೆಯಲ್ಲಿ ಒಬ್ಬ ಶಿರಸ್ತೇದಾರನಿದ್ದಾನೆ. ಯೋಗ್ಯನೇ. ಅನುಭವಿಕನೇ. ೪೦ ವರ್ಷದ ಮಗನಿದ್ದಾನೆ. ನಾಲ್ಕು ಹುಡುಗಿಯರ ಮದುವೆ

ಯಾಗಿದೆ. ಮನೆತುಂಬ ಜನರು. ದುಡ್ಡು, ಒಡವೆ ಏನು ಹೇಳಲಿ ಆರು ಮಂದಿ ಅಣ್ಣತಮ್ಮಂದಿರು ಮನೆಯಲ್ಲಿ.

ನೀಲ:--ಯಾರ ತಮ್ಮಂದಿರು ?

ಸುಬ್ಬ:--[ಸಹಜವಾಗಿ] ಅವನ ಹುಡುಗರು ಅಂದರೆ. ಆದರೂ ಕಲ್ಲು ಇದ್ದಂತೆ ಇದ್ದಾನೆ ನೋಡಿ ಮನುಷ್ಯ. ಪೆನ್ಶನ್ ೫೦ ರೂಪಾಯಿ ತಕ್ಕೊಂಡು ೧೩ ವರ್ಷಗಳಾದವು. (ಶಾಸ್ತ್ರಿ ಬೆರಗಾಗುತ್ತಾನೆ) ಇಷ್ಟರ ವರೆಗೆ ಒಂದು ದಿನವಾದರೂ ಹಣೆಗೆ ಶುಂಠಿ ಸಹ ಹಚ್ಚಲಿಲ್ಲ ಅಂದರೆ! ಹುಂ-ವಯಸ್ಸಿನಿಂದ ಮುದುಕನಾಗುತ್ತಾನೆಂದು ತಿಳಿಯುವುದು ಒಂದು ದೊಡ್ಡ ತಪ್ಪು ಶಾಸ್ತ್ರಿಗಳೇ ! ಪೆನ್ಶನ್ ಎಂದ ಕೂಡಲೆ ಗಾಬರಿಯಾಗಿಬಿಟ್ಟಿರಿ. ಒಂದು ಮಾತು ಕೇಳುತ್ತೇನೆ. ನೀವು ದೊಡ್ಡ ಪಂಡಿತರು. (ಒತ್ತಿ ಹೇಳುತ್ತಾನೆ) ದೇಹಕ್ಕೋ ಮದುವೆ ?—ಹೇಳಿ. ಇದು ಆ ಕೆಂಪ್ಮೋರೆಯವರಿಂದ ನಮ್ಮ ಜನರಿಗೆ ಬಂದ ದುರ್ಗುಣ. ಆತ್ಮಕ್ಕೆಲ್ಲಿಂದಯ್ಯಾ ವಯಸ್ಸುಗಿಯಸ್ಸು ಬಂತು ? ಶಾಸ್ತ್ರಿಗಳೇ ಇಷ್ಟೇನೋ ನೀವು ಓದಿಕೊಂಡ ಶಾಸ್ತ್ರ ? ಹಿಂದೂಗಳಿಗೆ ಮದುವೆಯೆಂದರೆ ಒಂದು ಆಧ್ಯಾತ್ಮಿಕ ವಿಷಯ (ಸ್ವ) ಅಲ್ಲಾ-ಈ ಹಳೇ ಶಾಸ್ತ್ರಿಗಳಿಗೂ ಹೊಸ ವಿಚಾರವೇ !

ನೀಲ;--(ಬೇಸರದಿಂದ) ಬಹಳ ಮುದುಕರಾಗಿರಬೇಕು.

ಸುಬ್ಬ:—ಮುದುಕರೋ ? ನಿಮಗೆ ಖರ್ಚಿಲ್ಲದೆ ಲಗ್ನವಾಗುವ ಉಪಾಯವೇ ತೋಚುವುದಿಲ್ಲವಲ್ಲಾ. ಇದಕ್ಕೇ ಈ ಕಾಲದಲ್ಲಿ ಬ್ರಾಹ್ಮಣರು ಹಾಳಾದರು ಎಂದು ಹೇಳುವದು. ಆ...ಆ ಉಪಾಯಗರ್ಭಿತವಾದ ಪುರಾತನ ಆರ್ಯರ ಬುದ್ಧಿ ಚಾತುರ್ಯವು ಹೋಗಿ ನೂರಾರು ಯೋಚನೆಗಳನ್ನಂಟಿಸಿಕೊಂಡು ಇಲ್ಲದ ಅಪಾಯಗಳಿಗೆ ಆಮಂತ್ರಣ ಕೊಡುವ ಬುದ್ಧಿ ಬಂದಿದೆ ಈ ಕಾಲದ ಬ್ರಾಹ್ಮಣರಿಗೆ. ಅಯ್ಯೋ... ಕಲಿಯುಗವೇ.

ನೀಲ;—(ದುಃಖದಿಂದ ತಡೆಯಲಾರದೆ) ಅಯ್ಯೋ ! ಹೊಟ್ಟೆಯ ಕರುಳನ್ನು ಕಿತ್ತು ಹುಲಿಗೆ ಮಾಲೆ ಹಾಕುವ ಕಾಲ ಬಂತೇ ? ಸಾಕಪ್ಪ–

ಈ ಬ್ರಾಹ್ಮಣ್ಯ–ಸಾಕೀ ಕನ್ಯಾದಾನ ! ಈ ದಿನ ಲಗ್ನ ಮಹೋತ್ಸವವನ್ನು ನೋಡಿ ನಾಳೆ ಪ್ರೇತಯಾತ್ರೆಯನ್ನೂ ನೋಡಬೇಕೋ ? ಮಂಗಳಕ್ಕಾಗಿ ಮಾಂಗಲ್ಯವನ್ನು ಕಟ್ಟಬೇಕೋ ಅಥವಾ ಅಮಂಗಳದ ಸಂಚಿಕಾರವಾಗಿಯೋ. ನಾಳೆ ಹುಡುಗಿಗೆ ಬರುವ ವೈಧವ್ಯವನ್ನು ತಿಳಿದು ಈ ಹೊತ್ತು 'ದೀರ್ಘ ಸುಮಂಗಲೀ ಭವ' ಎಂದು ಆಶೀರ್ವಾದ ಮಾಡಬೇಕೋ ? ಸುಳ್ಳು, ಮೋಸ, ಠಕ್ಕು, ದುಃಖಗಳ ಹಾಳು ಗೊಂದಲಕ್ಕೆ ಲಗ್ನ ಸಮಾರಂಭವೆಂಬ ಹೆಸರು ಬಂದು ಬಿಟ್ಟಿತಲ್ಲಾ ! ಈ ದಿನ ವಿವಾಹಿತಳಾಗಿ ನಾಳೆಯೋ ವಿತುಂತುವಾಗಿ ಜನ್ಮವನ್ನೆಲ್ಲಾ ಹಾಳು ಮಾಡಿಕೊಳ್ಳಬಹುದಂತೆ ಅದು ಧರ್ಮವೇ. ಆದರೆ ಮದುವೆಯಿಲ್ಲದೆ ಮಾತ್ರ ಹುಡುಗಿಯು ಇರಬಾರದಂತೆ. ಎಂತಹ ಧರ್ಮ ಇದು ! ಎಂತಹ ವಿಚಿತ್ರವಾದ ರೂಢಿ ! ! ಇಂತಹ ಬ್ರಾಹ್ಮಣ್ಯಕ್ಕೆ ಬೆಂಕಿ ಹಚ್ಚುವವರಾದರೂ ಇಲ್ಲವೆ ? ಸಮಾಜದ ದಬ್ಬಾಳಿಕೆಗೆ ಸರಿಯಾದ ಪೀಡೆಯು ಎಲ್ಲಿಯಾದರೂ ಇದೆಯೋ ? ಛೆ ! ಎಲ್ಲಿಯೂ ಇಲ್ಲ.

ಸುಬ್ಬ:—ಏನು ಏನಿದು ಬಡಬಡಿಸುತ್ತಿದ್ದೀರಿ ! ಶಾಸ್ತ್ರಿಗಳೇ ಇವೆಲ್ಲ ಅಚ್ಚು ಹಾಕಿಸಲಿಕ್ಕೆ ಯೋಗ್ಯವಾದ ಮಾತುಗಳು. ಉಪನ್ಯಾಸಕ್ಕೆ ಒಂದನೇ ನಂಬರ್ ನೋಡಿ. ಆದರೆ ಕೆಲಸಕ್ಕೆ ಮಾತ್ರ ಈ ಉದ್ಗಾರಗಳು ಉಪಯೋಗವಿಲ್ಲ ಸ್ವಾಮಿ.

ನೀಲ:—(ದಿಕ್ಕು ತೋಚದವನಾಗಿ) ಏನು ಮಾಡಬೇಕು ? ನಿಮ್ಮ ಮಾತಿಗೆ......ಲಗ್ನವಾಗಿಯೇ ತೀರಬೇಕಷ್ಟೆ...ಅಲ್ಲ, ಸ್ವಲ್ಪ ತಾಳಿ- ಒಂದು ದಿನ ತಾಳಿ, ನಾಳೆ ರಮೆಯ ಲಗ್ನಕ್ಕಾಗಿ ಅವಳನ್ನು ನೋಡಲಿಕ್ಕೆ ಬರುವವರಿದ್ದಾರೆ. ಅದು ಏನಾಗುತ್ತದೆ ನೋಡಿ. ಅನಂತರ...

ಸುಬ್ಬ:—ಸರಿ ಸರಿ...ಆ ವ್ಯವಸ್ಥೆ ನಾನು ಮಾಡುತ್ತೇನೆ. ಹೋಗಿ (ಸ್ವ) ಸರಿ ಈ ಭಿಕಾರಿಯ ಕೈಯಿಂದ ಬಿಡಿಕಾಸು ಬರದಂತಿದ್ದರೂ ಆ ಮುದುಕನ ಕಡೆಯಿಂದ ೫೦೦ ರೂಪಾಯಿಗಾದರೂ ಏಟು ಹಾಕಿಯೇ ತೀರಬೇಕು

## ಅಂಕ ೧. ದೃಶ್ಯ ೩.

[ನೀಲಕಂಠ ಶಾಸ್ತ್ರಿಯ ಮನೆ. ಒಂದು ಹಲಗೆಯ ಮಂಚದಮೇಲೆ ರಮೆಯು ಕೂತಿದ್ದಾಳೆ. ಇನ್ನೊಂದು ಪಕ್ಕಕ್ಕೆ ಎರಡು ಹಳೆಯ ಕುರ್ಚಿಗಳಿವೆ. ಗೋಡೆಗೆ ಅಲ್ಲಲ್ಲಿ ರಾಮ ಪಟ್ಟಾಭಿಷೇಕ, ಮಾರ್ಕಂಡೇಯ ಮುಂತಾದವರ ಪಠಗಳಿವೆ. ಒಂದು ಸಚಿತ್ರ ಮಾಸಿಕದ ಕಾಗದಗಳನ್ನು ತೆಗೆದುಕೊಂಡು ನೋಡುತ್ತಿದ್ದಾಳೆ. ಒಂದು ಚಿತ್ರವನ್ನು ನೋಡಿ ಬೆರಗಾಗಿ ದುಃಖಿತಳಾಗಿ ಕಣ್ಣೀರು ಸುರಿಸುವಳು.]

ರಮಾ:—(ಗದ್ಗದ ಸ್ವರದಿಂದ) ಯಾರೋ ಹೇಳಿದಂತೆ (ಮೆಲ್ಲಗೆ ಹಾಡುತ್ತಾಳೆ) "ವಧುವಾಗಲು ವಧೆಗೊಂಡೆಯಾ." (ಇದನ್ನು ಎರಡು ಮೂರು ಸಾರಿ ಬಹು ದುಃಖ ಸೂಚಕವಾಗಿ ಹಾಡಿ)—ಸ್ನೇಹಲತಾ —ವರದಕ್ಷಿಣೆಯ ರಾಕ್ಷಸ ರೂಢಿಗಾಗಿ ಬೆಂಕಿಗೆ ಬಲಿಯಾದೆಯಾ? ಏನು ಮಾಡಿದಂತಾಯಿತು? ನಿನ್ನ ವಯಸ್ಸು...೧೪. ನನ್ನದೋ ...೧೭. ಎಣ್ಣೆ ಹಾಕಿಕೊಂಡು ಸುಟ್ಟುಕೊಂಡಳೋ ಈಕೆ? ಅಯ್ಯೋ...೩ ವರ್ಷ ನನಗೆ ವ್ಯರ್ಥವಾಗಿ ನನ್ನ ತಂದೆಯು ಕಷ್ಟ ಕೊಟ್ಟನು...ತಾನೂ ಕಷ್ಟಪಟ್ಟನು. ಈ ಉಪಾಯ ಮೊದಲೇ ಗೊತ್ತಾಗಿದ್ದಿದ್ದರೆ, ನಾನೂ ಅದನ್ನು ಮಾಡಿ ಜೀವನಯಾತ್ರೆಯನ್ನು ಮುಗಿಸುತ್ತಿದ್ದೆನಲ್ಲವೆ? (ಮೌನವಾಗಿದ್ದು ಕ್ರೋಧವು ಬೆಳೆಯುತ್ತ) ಪಾಪಿ ಪೈಶಾಚ್ಯರೂಢಿಯಿಂದ ಪ್ರೋತ್ಸಾಹಹೊಂದಿದ ಅಧಿಕಾರ ಮದಾಂಧರಾದ ಕ್ರೂರ ಗಂಡಸರ, ಮತ್ತು ಅವರಾಟದ ಗೊಂಬೆಗಳಾದ ಪಶುವಿನಂಥಾ ಹೆಂಗಸರ ಕಾಮಾಗ್ನಿಹೋಮಕ್ಕೆ ಈ ನಿರಾಧಾರ ಬಾಲಿಕೆಯರ ದೇಹವೇ ಉತ್ತಮ ಆಹುತಿ. ಧರ್ಮದ ನಾಮದಿಂದ ಮೆರೆಯುವ ಈ ಕರ್ಮಕ್ಕೆ ಬಲವಾದ ಬಲಿ...ಸ್ವನಾಶನ. ಆದರೆ ಒಬ್ಬ ಸ್ನೇಹಲತೆಯು ಹಚ್ಚಿದ ಬೆಂಕಿಯಿಂದ ಈ ಡಾಂಭಿಕ ಅಂಧಕಾರಮಯವಾದ ಸಮಾಜದಲ್ಲಿ ಸಾಕಷ್ಟು ಬೆಳಕು ಎಲ್ಲಿಂದ ಬೆಳಗಬೇಕು! ಸಾಲದು...ಸಾಲದು, ಹೆಂಡಂದಿರ ಕಷ್ಟಗಳ ಕಡೆಗೇ ನೋಡದೆ, ಅವರಿಗೂ ವಿಕಾಸವನ್ನು ಪಡೆಯತಕ್ಕ ಆತ್ಮ

ಎದೆಯೆಂದು ತಿಳಿಯದೆ, ತಮ್ಮ ಕಾಮಾಗ್ನಿಯ ಶಾಂತಿಸಾಮಗ್ರಿಯಾಗಿ ಮಾತ್ರ ಹೆಂಗಸರಿರುವರೆಂದು ತಿಳಿದುಕೊಳ್ಳುವ ಗಂಡಂದಿರ ದುರ್ವರ್ತನಕ್ಕೊಳಬಿದ್ದು ಕೊಳೆತು ಸಾಯುವುದಕ್ಕಿಂತ ಒಂದೇ ಏಟಿಗೆ ಬೆಂಕಿಗೆ ಬಿದ್ದು ಸಾಯುವುದುತ್ತಮವಲ್ಲವೆ ! ಪಾಪಪ್ರೇರಿತ ಪುರುಷ ಸ್ತ್ರೀ ಸಮೂಹಕ್ಕೆ ಇದರಿಂದ ಬುದ್ಧಿ ಬರುವುದು ಸಂಶಯಾಸ್ಪದವಾಗಿರುವದಾದರೂ ಹುಡುಗಿಯರ ಗೋಳೇನೋ ಮುಗಿಯುವುದು ನಿಜವಷ್ಟೆ. (ಚಿತ್ರವನ್ನು ನೋಡುತ್ತಾ ಮತ್ತೆ ಹಾಗೆ ಹಾಡುತ್ತಾಳೆ) 'ವಧುವಾಗಲು ವಧೆಗೊಂಡೆಯಾಃ ಅಸುರ ವರದಕ್ಷಿಣೆಯ ರೂಢಿಗಸುವನ್ನಿತ್ತು, ಸಂಸ್ಕರಣಕಾರ್ಯವನ್ನು ಕೈಕೊಂಡೆಯಾ|| ಸುರೋಕ್ತಿಯನು ತ್ಯಜಿಸಿ, ನರಯುಕ್ತಿಯನು ಭಜಿಪ, ವರವರ್ಗ ತೆರಳದಿಹುದೇ || ' ಎಂತಹ ಹುಚ್ಚಿ ನಾನು... ಈ ಚಿತ್ರದ ಕಣ್ಣುಗಳು ಹುಚ್ಚೋ ?

ಅಯ್ಯೋ ಇಷ್ಟು ಹುಡುಗಿಯರ ಲಗ್ನಮಾಡಿ ನಮ್ಮಪ್ಪ ಹುಚ್ಚನಾಗಲಿಲ್ಲವೆ! ಅಮ್ಮ!–ಅಮ್ಮ!–ಎಂತಹ ರತ್ನದಂತಹ ವ್ಯಕ್ತಿ! ಮನೆ–ಮಾರು, ಕೆಲಸ ಎಲ್ಲಾ ಹಾಳಾದರೂ ದೇವರಲ್ಲೇ ಭಕ್ತಿಯನ್ನಿಟ್ಟು ಎಷ್ಟು ಶಾಂತಳಾಗಿದ್ದಾಳೆ ! ನಾನು ಎಲ್ಲಿ ಸ್ನೇಹಲತೆಯಂತೆ ಬೆಂಕಿಗೆ ಪಾಲಾಗುತ್ತೇನೋ ಎಂದು ನಮ್ಮಪ್ಪ ಈ ಪತ್ರಿಕೆಯನ್ನು ಪೆಟ್ಟಿಗೆಯೊಳಗಿಟ್ಟಂತಿದೆ. ಛೆ–ಅಪ್ಪಾ–ನಿನ್ನ ಮಗಳಲ್ಲವೆ ನಾನು ? ಸಹನದ ಘನಮೂರ್ತಿಯೇ ಆದ ನನ್ನಮ್ಮನ ಹೊಟ್ಟೆಯಲ್ಲಿ ಹುಟ್ಟಲಿಲ್ಲವೆ ನಾನು ? ನಿನ್ನ ಶಿಕ್ಷಣದಲ್ಲಿ ಬೆಳೆದವಳಲ್ಲವೆ ನಾನು ? ಒಂದು ವೇಳೆ ಲಗ್ನವೂ ಆಗಲಿಲ್ಲ. ಆದರೂ––

ರಮೇಶ :––(ಪ್ರವೇಶ) ರಮಾ, ಓಹೋ ನೀನೋ- ಇಂತಹ ಪಟ್ಟಿಯ ಬಟ್ಟೆಗಳು ನಿನ್ನಪ್ಪನಿಗೆ ಸರಿಬೀಳುವುದಿಲ್ಲವೆಂದು ನಾನು ತಿಳಿದುಕೊಂಡಿದ್ದೆ !

ರಮಾ :––ಹುಡುಗಿಯರಿಗಾಗಿ ಬೇಡವಾದ ನೂರಾರು ಕೆಲಸಗಳನ್ನು ಬೇಕು ಎಂದು ಅಪ್ಪಂದಿರು ಮಾಡಲೇಬೇಕಾಗುತ್ತದೆ. ಅಂಥವುಗಳಲ್ಲಿ

ಇದೊಂದು. ಹುಡುಗಿಯರ ಲಗ್ನವಾಗುವ ವರೆಗೆ ನ್ಯಾಯ ಅನ್ಯಾಯ, ದಯೆ ನಿರ್ದಯೆ, ಎಂಬ ಭಾವನೆಗಳನ್ನೇ ಬಿಟ್ಟು, ಹುಡುಗರಿಗೂ ಅವರ ಯಜಮಾನರಿಗೂ–ಅದೇಕೆ–ಅವರ ದಾಸರಿಗೂ ದಾಸಾನು ದಾಸರಿಗೂ ಸರಿಯಾಗಿ ನಡೆಯಬೇಕಾದ್ದೇ ಧರ್ಮವಲ್ಲವೆ?

ರಮೇಶ :—(ಸ್ವ) ಈ ಹುಡುಗಿಗೆ ಇಷ್ಟು ಧಿಟ್ಟತನವಿರಲಿಲ್ಲ.! ಪ್ರಸಂಗವಶಾತ್ ಹೀಗಾಗಿದ್ದಾಳೆ! ಸಹಜವೇ (ಆಕೆಗೆ) ಮೋಹನನೆಲ್ಲಿ? ರಮೇಶ ಬಂದು ಕಾದಿದ್ದಾನೆಂದು ಹೇಳುತ್ತಿಯೋ ಅವನಿಗೆ. ವೆಂಕಮ್ಮ ಎಲ್ಲಿ ಕಾಣುವುದಿಲ್ಲವಲ್ಲ?

ರಮಾ :—ಅಮ್ಮ ದೇವಾಲಯಕ್ಕೆ ಹೋಗಿದ್ದಾಳೆ. ಅಣ್ಣ ಹೋಗಿದ್ದಾನೆ ಹೀಗೆ ಒಂದು ಕೆಲಸಕ್ಕೆ. ಜೊತೆಗೆ ಅಪ್ಪ ಕೂಡ ಹೋಗಿದ್ದಾನೆ.

ರಮೇಶ :—ಇಷ್ಟು ಬಿಸಿನಲ್ಲಿಯೋ ದೇವದರ್ಶನ! ಹಗಲ ಹೊತ್ತು...

ರಮಾ :—(ತಡೆದು) ದಿನ ಬಂದು ಹಾಗೆ. ಎಷ್ಟುದಿನ ಸುಖದಾಶೆ? ಎಷ್ಟು ದಿನ ಲಜ್ಜೆಯನ್ನು ಹಿಡಿದುಕೊಳ್ಳುವುದು. ಈಗ ನೋಡು. ಎಷ್ಟೋ ಮಂದಿ ನನ್ನನ್ನು ನೋಡಲಿಕ್ಕೆ ಬರುವವರು. ಈ ಹೊತ್ತೂ ಬರುತ್ತಾರಂತೆ, ಯಾರೋ. ಈಗ ಲಜ್ಜೆಗಿಜ್ಜೆ ಹೋಗಿಯೇ ಬಿಟ್ಟಿತು. ಮುಸುರೆ ತಿಕ್ಕುವುದೂ ಒಂದೇ. ಈ ನೋಡಲಿಕ್ಕೆ ಬಂದವರಿಂದ ನೋಡಿಸಿಕೊಳ್ಳುವುದೂ ಒಂದೇ.

ರಮೇಶ :—(ಸ್ವ) ಎಷ್ಟು ವ್ಯತ್ಯಾಸ! (ಪ್ರ) ರಮಾ ನಿನ್ನನ್ನು ನೋಡಿ ನನಗೆ ಬಹಳ ಪಾ...ಪ ಅನ್ನಿಸುತ್ತದೆ.

ರಮಾ :—ಉಂ...ದಯಾ ಮತ್ತು ಪ್ರೇಮ ಅವಳಿಜವಳಿಯೋ ಎಂದು ಯಾರೊ ಒಬ್ಬ ಕವಿಯು ಹೇಳಿದ್ದಾನಲ್ಲವೆ.

ರಮೇಶ :—ಹೌದು ಸ್ಥಿತಿಯೇನೋ ಹಾಗೇ ಇದೆ.

ರಮಾ :—ಮತ್ತೆ .....

ರಮೇಶ:--ಮತ್ತೇನೋ, ಹಿಂದು ಮುಂದು ಎಲ್ಲಾ ಕತ್ತಲೆ......ಈ ದಿನ ನಿನ್ನನ್ನು ನೋಡಲಿಕ್ಕೆ ಬರುವರೆಂದು ಈ ಉಡುಗೆಯೋ ?

ರಮಾ:--ಈ ದಿನ ಬರುವ ಪಶು ವೈದ್ಯರಿಗೆ ಈ ಫ್ಯಾಷನ್ ಪ್ರಿಯವಂತೆ. ನೋಡಲಿಕ್ಕೆ ಬರುವ ಗಂಡಸರ ಮರ್ಜಿಹಿಡಕೊಂಡು ಅಲಂಕೃತ ರಾಗುವುದು ನಮ್ಮಂಥ ಬೆಳೆದ ಕನ್ಯೆಯರ ಶಿಕ್ಷಣದ ಮುಖ್ಯಾಂಗ. ಈಗ ಹೇಳು, ನಮಗೂ ವೇಶ್ಯೆಯರಿಗೂ ಏನಾದರೂ ವ್ಯತ್ಯಾಸ ವಿದೆಯೋ ?

ರಮೇಶ:--(ಬೆರಗಾಗಿ) ನಿಜವೇ--ಕಠೋರವಾದ ಸತ್ಯವಿದು.

ರಮಾ:--ಸತ್ಯವೇನೋ ಅಹುದಷ್ಟೆ ?

ರಮೇಶ:--ಸತ್ಯವೆಂದೇ ಕಠೋರವಾಗಿದೆ. ರಮಾ--ಬಾಲ್ಯವು ಜ್ಞಾಪಕ ವಿದೆಯೋ ಎಂತಹ ಇಂಪಾದ ಕಾಲವದು ? ಸ್ಮರಣಮಾತ್ರದಿಂದಲೇ ಬಾಲ್ಯವೇ ಮತ್ತೊ ಬರಲಿ ಎಂಬ ಪ್ರಾರ್ಥನೆಯೇ ಹೃದಯದಿಂದ ಹೊರಡುತ್ತದೆ. ಆದರೇನಾಯಿತು ! ಕಾಲಚಕ್ರ ಭ್ರಮಣದಲ್ಲಿ ಸಿಕ್ಕಿ ಇಲ್ಲಿಗೆ ಬಂದಮೇಲೆ, ಎಲ್ಲಿ ಆ ಪ್ರೇಮ, ಆ ನಿರುದ್ದಿಶ್ಯ ಸ್ನೇಹ ; ಆ ನಿರ್ಹೇತುಕ ಆಟಪಾಟಗಳು.

ರಮಾ:--ಹೋದಕಾಲದ ಮಹಿಮೆಯನ್ನು ಹಾಡುವುದೇ ಈಗಿನ ದೊಡ್ಡಸ್ತಿಕೆಯಾಗಿದೆ. ಎಂಥ ಗಂಡಸುತನ ! ಆವಾಗ ಋಷಿಗಳಿದ್ದರೆ ಈವಾಗ ನೀವು ನುಸಿಗಳಂತಿರಬೇಕೇ ? ಕೈ ಕಟ್ಟಿಕೊಂಡು ಅವರನ್ನೇ ಹೊಗಳುತ್ತ ಒಲೆಯ ಹತ್ತಿರ ಕೂತು ಪುಳು ಪುಳು ಅಳಲಿಕ್ಕೆ ನಮ್ಮಲ್ಲಿ ಹುಡುಗಿಯರಿಗೇನು ಕಡಿಮೆಯೋ ?

ರಮೇಶ:--(ನಿಟ್ಟುಸಿರು ಬಿಡುತ್ತ) ಹಂ...ಬೆಂಕಿಯು ಉರಿಯುವುದಕ್ಕೆ ಮೊದಲು ಅದಕ್ಕೆ ಊದುಗಾಳಿ ಎಷ್ಟೆಂದು ಒಲೆ ಊದಿದವರಿಗೇ ಗೊತ್ತು.

ರಮಾ:--ಎಲ್ಲರಿಗೂ ಗೊತ್ತು-ಹೇಳಲಿಕ್ಕೆ ಬರುವುದಿಲ್ಲ. ಆದರೆ ಹತ್ತಿದ ಬೆಂಕಿಯನ್ನಾರಿಸಬೇಕೆಂಬ ಮನಸ್ಸಿದ್ದವರು ನೀರಿದ್ದೆಡೆಗೆ ಓಡುವು

ದಿಲ್ಲ ! ಮೃಗ ಜಲದ ಹಿಂದೆ ಕೊಡ ತಕ್ಕೊಂಡು ಓಡಿದರೇನು ಬಂತು ?

ರಮೇಶ :—ನಿಜ. ನಿನ್ನಲ್ಲಿ ಚಿಕ್ಕಂದಿನಿಂದ ಪ್ರೇಮವಿತ್ತೆಂಬದನ್ನು ಹೇಳಲಿಕ್ಕೆ ಧೈರ್ಯ ಸಾಕಷ್ಟಿಲ್ಲದೆ ಹೋಯಿತು. ಆದರೆ ನಿನ್ನ ದುಸ್ಥಿತಿಯನ್ನು ನೋಡಿ ಆ ಪ್ರೇಮವು ಇಮ್ಮಡಿಯಾಗಿದೆ. ಆದರೂ ಏನು ಮಾಡಲಿ–ನಾನು ಸ್ವತಂತ್ರನೇ ? ತಂದೆಗೊಳಪಟ್ಟವನೇ ಅಲ್ಲವೆ ?

ರಮಾ :—ಮತ್ತೆ ಯಾರಮೇಲೆ ಪ್ರೇಮವಿದೆಯೋ ಅವಳು ಬೇರೆಯವರ ಪಾಲಾದರೆ ನಿನಗೆ ಸಂತೋಷವೋ ? ಎಂತಹ ಪೌರುಷ ! ಎಂಥಾ ಅರ್ಥವಿಲ್ಲದ ಪರಾಧೀನತೆ ! ಈ ಹೊತ್ತಿನ ಡಾಕ್ಟರನ ವ್ಯಾಪಾರವು ಸರಿಹೋಗುವುದಿಲ್ಲವಾದರೆ ಒಬ್ಬ ೮೦ ವರುಷದ ಮುದುಕನೊಡನೆ ಗಂಟುಬೀಳುವ ಸಂಭವ ಬಂದಿದೆ ನನಗೆ--ಗೊತ್ತೋ ?

ರಮೇಶ :—ಹೀಗೇ...ಎಲ್ಲಿಯೋ...ಕೇಳಿದ್ದೆ. ಏನು ಮಾಡಬೇಕೋ ತೋರುವುದಿಲ್ಲ. ನಮ್ಮ ವಿದ್ಯೆ, ಪೌರುಷ, ಹಾಗಿರಲಿ......ಒಂದು ಕಡೆ ಚಿಕ್ಕಂದಿನಿಂದ ಸೇರಿಕೊಂಡಿರುವ ರೂಢಿಯ ಮೂಢತನ. ಇನ್ನೊಂದುಕಡೆ ಸ್ವಲ್ಪ ಹೊಸ ವಿಚಾರ. ಇವುಗಳ ಜಗಳದಲ್ಲಿ ಸ್ಥಿಮಿತ ಬುದ್ಧಿಯೇ ಅಲ್ಲ. ಏನೇ ಆಗಲಿ ಈ ಹೊತ್ತಿನ ವ್ಯಾಪಾರ ಗಿಟ್ಟದಂತೆ ಮಾಡು. ಮುಂದೆ ನೋಡೋಣ.

ರಮಾ :—(ಧಿಕ್ಕರಿಸಿ) ಉಂ ಇಂತಹ ಟೊಳ್ಳು ಆಶೆಗಾಗಿ ಈ ದಿನ ಪಾರಾಗುವ ಸಂಕಟವನ್ನು ಮುಂದಕ್ಕೆ ಯಾಕೆ ತಳ್ಳಬೇಕು ? (ಸಂಕೋಚದಿಂದ) ಮೊದಲೇ ಮಾತು......

ರಮೇಶ :—ಮೊದಲೇ ಮಾತು ಕೊಡಲೇ...ಮಾತು...ಆದನ್ನು ಕೊಟ್ಟು ಪೂರೈಸಲಿಕ್ಕೆ ನನ್ನಿಂದಾದೀತೇ ?

ರಮಾ:—ಇಚ್ಛೆಯಿದ್ದಲ್ಲಿ ಅಸಾಧ್ಯವೇನೇನೂ ಇರಲಾರದು.

ರಮೇಶ :—(ಸ್ವ) ನನಗೆ ಇಚ್ಛೆಯಾದರೂ ಇದೆಯೋ? (ಪ್ರ) ಸ್ವಲ್ಪ ಹೊತ್ತಾದರೂ ಆಲೋಚಿಸುತ್ತೇನೆ. ಕೆಲವು ಸ್ನೇಹಿತರನ್ನು...ಕಡೆಗೆ ಮೋಹನನನ್ನಾದರೂ—ಕೇಳಿ ಸಲಹೆಮಾಡಿಕೊಂಡು ಹೇಳುತ್ತೇನೆ. (ಸ್ವ) ಮಾತುಕೊಡಲೋ.......

ರಮಾ :—ಸಂಕಲ್ಪವಾದಮೇಲೆ ಉಪಾಯಗಳು ತಾವೇ ತೋರಿಬರುವುವು. ಇಷ್ಟು ಹೊತ್ತು ನೀನಿಲ್ಲಿ ಕೂತೆ-ಆದರೆ ನಿನ್ನನ್ನು ನಾನು ಹೇಗೆ ನೋಡುತ್ತಿದ್ದೆನೋ, ಏನೆಂದು ಭಾವಿಸಿದ್ದೆನೋ, ನೋಡು...ಹೇಗೇಗೋ ಮನಸ್ಸು......(ಎನ್ನುತ್ತ ಕಳವಳಿಸುವಳು)

ರಮೇಶ :—(ಚೆನ್ನಾಗಿ ಆಲೋಚಿಸುತ್ತಿರುವನು. ಫಕ್ಕನೆ ಆಕೆಯ ಕೈಗಳನ್ನು ತಕ್ಕೊಂಡು) ನಿನ್ನನ್ನು ಹೀಗೆ ನೋಡಲಾರೆ...ಆಗದು...ರಮಾ ಹೆದರಬೇಡ ! ಎಲ್ಲಾ ಸಂಕಟಗಳನ್ನೂ ಇದಿರಿಸಿ ನಿನ್ನನ್ನೇ ವರಿಸಿಕೊಳ್ಳುವೆನು. ಬಂಧುಬಾಂಧವರೇ ನನ್ನನ್ನು ತಿರಸ್ಕರಿಸಲಿ, ಸಮಾಜವೇ ತುಚ್ಛೀಕರಿಸಲಿ, ದಾರಿದ್ರ್ಯವೇ ಬರಲಿ—ಏನೇ ಆಗಲಿ-ನಿನ್ನನ್ನು ಮಾತ್ರ ಈ ಕಷ್ಟದಲ್ಲಿ ಮುಣುಗಗೊಡಲಿಕ್ಕಿಲ್ಲ.

ರಮಾ :—ನಿಜವೋ......ನಿಜವೋ.........

ವೆಂಕಮ್ಮ :—(ಪ್ರವೇಶ. ಆಗಲೇ ಕೈಬಿಡುತ್ತಾನೆ. ಇಬ್ಬರೂ ದೂರ ಸರಿಯುತ್ತಾರೆ.) ಯಾರು ! ರಮೇಶರಾಯರೇ ! ಯಾವಾಗ ಬಂದಿರಿ? ರಮಾ-ಕೂತುಕೊಳ್ಳಿ ಎಂದು ಹೇಳಬೇಕಾಗಿತ್ತೋ ಇಲ್ಲವೋ? ಕಾಫಿ ಮಾಡು (ರಮೇಶನಿಗೆ) ಕೂತುಕೊಳ್ಳಿ.

ರಮೇಶ :—ಬೇಡ ಕ್ಷಮಿಸಿ. ಈಗಲೇ ಕಾಫಿ ತಕ್ಕೊಂಡು ಬಂದಿದ್ದೇನೆ.

ವೆಂಕಮ್ಮ:—ಏನೋ...ನಮ್ಮ...ಬಡವರ ಕಾಫಿ...ನಿಮಗೆ......

ರಮೇಶ :—ಸರಿ. ನಿಮ್ಮ ಒತ್ತಾಯಕ್ಕಾಗಿಯಾದರೂ ತಕ್ಕೊಳ್ಳುತ್ತೇನೆ ತಾಯಿ. ಆದರೆ ನಿಮಗೆ ಮಾತ್ರ ತೊಂದರೆಯಾಗುತ್ತದೆ

[ರಮೆಯು ಒಳಗೆ ಹೋಗುತ್ತಾಳೆ.]

ವೆಂಕಮ್ಮ:--ಅದರಲ್ಲೇನು ತೊಂದರೆ. ಹ್ಯಾಗಾದರೂ ಇಷ್ಟರಲ್ಲೇ ಕಾಫಿ ಮಾಡುವವಳೇ ಇದ್ದೆ. ಈಗ ರಮೆಯನ್ನು ನೋಡಲಿಕ್ಕೆ ಬರುವವರಿದ್ದಾರೆ. ಅವರಿಗಾದರೂ ಸ್ವಲ್ಪ ಕಾಫಿ ಮಾಡಬೇಕಷ್ಟೆ. ಪ್ರತಿದಿನ ನಡೆಯುವದೇ ಇದು ನಮ್ಮಲ್ಲಿ. ನೋಡಲಿಕ್ಕೆ ಬರುವವರೇ ಬರುವವರು, ಹೋಗುವವರೇ ಹೋಗುವವರು. ಆದರೆ ಸರಿಬೀಳುವುದು ಒಬ್ಬರಿಗೂ ಇಲ್ಲ. ವರದಕ್ಷಿಣೆ ಎಂದಕೂಡಲೆ ನಮ್ಮ ಪ್ರಾಣವೆಲ್ಲ ಹಾರಿ ಹೋಗುತ್ತದೆ.

ರಮೇಶ:--ಈ ವರದಕ್ಷಿಣೆಯಿಂದ ಏನಾಗುತ್ತದೋ ಆ ದೇವರೇ ಬಲ್ಲ. (ಸಚಿತ್ರ ಭಾರತದ ಪಾನುಗಳನ್ನು ತಿರುಗಿಸುತ್ತ ಫಕ್ಕನೆ ಸ್ನೇಹಲತೆಯ ಚಿತ್ರವನ್ನು ನೋಡಿ ಆಶ್ಚರ್ಯಚಕಿತನಾಗಿ) ಇದೇನು ಈ ಅಂಕ ಇಲ್ಲಿಗೆ ಹೇಗೆ ಬಂತು ! ಇದನ್ನು ರಮೆಯು ಓದಲಿಲ್ಲವಷ್ಟೆ !

ವೆಂಕಮ್ಮ:--ಏನು ವಿಶೇಷ ಅದರಲ್ಲಿ ?

ರಮೇಶ:--ವರದಕ್ಷಿಣೆಗೆ ಬಲಿ ! ತನಗಾಗಿ ಆದ ವರದಕ್ಷಿಣೆಯ ದಬ್ಬಾಳಿಕೆಯಿಂದ ತಾನೂ ಸುಖಪಟ್ಟು ಹಿರಿಯರಿಗೂ ಸುಖವನ್ನುಂಟು ಮಾಡುವಂತೆ ಸ್ನೇಹಲತೆ ಎಂಬ ಹುಡುಗಿಯು ಎಣ್ಣೆಯನ್ನು ಮೇಲೆ ಚೆಲ್ಲಿಕೊಂಡು, ಸುಟ್ಟುಕೊಂಡಳು ಎಂಬ-ವಾರ್ತೆ ಇದರಲ್ಲಿದೆ; ಮತ್ತು ಇಕೊಳ್ಳಿ ಫೋಟೋ ಸಹಿತವಾಗಿ...

ವೆಂಕಮ್ಮ:--ಎಷ್ಟೋ ಹುಡುಗಿಯರು ಹಾಗೆ ಬಲಿಯಾಗಬಹುದು. ಆದರೆ ಪಾಪ ಹುಡುಗಿಯರು. ಅವರನ್ನು ಸುಟ್ಟ ಬೆಂಕಿಯಾದರೂ ಜನರ ಕಣ್ಣಿಗೆ ಬಡಿದು ಅದನ್ನು ತೆರೆಯುವಷ್ಟು ಬಲವಾಗಿರಬೇಕು ಹೇಗೆ ? ಸತಿಸಹಗಮನದ ಬೆಂಕಿಯನ್ನು ಸಹ ಕಣ್ದೆರೆದು ಬಾಯಿಮುಚ್ಚಿಕೊಂಡು ನೋಡಿ ಹಿಂದೆ ಹಬ್ಬಮಾಡುತ್ತಿದ್ದರಂತೆ ! ಅವರ ಸಂತಾನವೇ ಅಲ್ಲವೆ ಇವರು ? ಇರಲಿ ನಮ್ಮ ಹುಡುಗಿಯು ನೋಡಲಿಲ್ಲ ಇದನ್ನು. ಒಳ್ಳೆಯದೇ ಆಯಿತು. ಇಲ್ಲವಾದರೆ ಜೀವನಕ್ಕೆಲ್ಲಿಯಾದರೂ ಅಪಾಯ... !

ರಮೇಶ:--ಛೇ-ಛೇ-ಹಾಗೇನೂ ಮಾಡಿಕೊಳ್ಳಲಿಕ್ಕಿಲ್ಲ. ಮೊದಲೇನೊ ನನಗೂ ಸ್ವಲ್ಪ ಭಯವಿತ್ತು. ಆದರೆ ಸ್ವಲ್ಪ ಹೊತ್ತಾಯಿತು... ನನ್ನ ಊಹೆಯು ಬದಲಾಗಿ ಹೋಗಿದೆ ಈಗ.

ವೆಂಕಮ್ಮ:--ಮುಂದೆ ಭಯವಿಲ್ಲವೋ ? ಯಾಕದು ?

ರಮೇಶ:--ಅಮ್ಮಾ ಯಾರಿಗೂ ಹೇಳಬೇಡಿ. ಶಾಸ್ತ್ರಿಗಳಿಗೂ ಹೇಳಬಾರದು. (ಹೂಂ ಗುಟ್ಟುತ್ತಾಳೆ) ನಾನು (ಕಿವಿಯಲ್ಲಿ) ಹೀಗೆಂದು ರಮೆಗೆ ಮಾತುಕೊಟ್ಟಿದ್ದೇನೆ.

ವೆಂಕಮ್ಮ:--(ಬಹು ಸಂತೋಷದಿಂದ) ರಮೇಶರಾವ್ ! ಇದು ನಿಮ್ಮ ಜನ್ಮನಾಮವೋ ? ದೇವರು ನಿಮಗೆ ದೀರ್ಘವಾದ ಆಯುಷ್ಯವನ್ನೀಯಲಿ (ಕಣ್ಣುಗಳನ್ನೊರಸುತ್ತ) ನನ್ನ ಚರ್ಮವನ್ನು ಸುಲಿದು ನಿಮ್ಮ ಕಾಲಿಗೆ ಜೋಡು ಮಾಡಿಸಿಕೊಟ್ಟರೂ ನಿಮ್ಮುಪಕಾರಕ್ಕೆ ಕಮ್ಮಿಯೇ. ನಿಮ್ಮ ಸಂಸಾರವು ಚೆನ್ನಾಗಿಯೇ ಜರಗುವುದು. ದೇವರ ದಯೆಯಿಂದ ಆದರೆ ಯಜಮಾನರನ್ನು ಒಂದು ಮಾತು ನೀವೇ ಕೇಳಿಬಿಡುವುದು ಉತ್ತಮವಲ್ಲವೆ ?

ರಮೇಶ:--ಸರಿ. ಅದನ್ನು ನಾನು ನೋಡಿಕೊಳ್ಳುತ್ತೇನೆ. ನಿಮ್ಮ ಅಳಿಯನ ಕೂಡ ಮಾತನಾಡಿ ನಾವಿಬ್ಬರೂ ಬರುತ್ತೇವೆ.

ವೆಂಕಮ್ಮ:—ಕಾಫಿಮಾಡಲಿಕ್ಕೆ ಹೋದವಳು ಅಡಿಗೇ ಇದ್ದುಬಿಟ್ಟಳೇ ಇವಳು. ರಮಾ (ಎಂದು ಕರಿಯುತ್ತ ಒಳಗೆ ಹೋಗುತ್ತಾಳ)

ರಮೇಶ:—(ಸ್ವ) ದುಃಖಿಗಳ ಕಣ್ಣೀರನ್ನು ಹೋಗಲಾಡಿಸುವಂಥಾದ್ದು ಎಂತಹ ಧರ್ಮಕಾರ್ಯವೆಂದು ಈ ದಿನ ನನಗೆ ತಿಳಿಯಿತು. ಅವರು ದುಃಖಿಸುತ್ತಿರುವಾಗಲೇ ಅವರ ಕಣ್ಣೀರ ಉದ್ದೇಶವನ್ನು ರೂಪಾಂತರಗೊಳಿಸಿ ಆನಂದಾಶ್ರುಗಳನ್ನಾಗಿ ಮಾಡುವವರೇ ಭಾಗ್ಯವಂತರಲ್ಲವೆ! ನಿಜವಾದ ಧರ್ಮಾಭಿಮಾನಿಗಳು! (ರೋಷದಿಂದ) ದುಃಖಪಡುವವರನ್ನು ಹಿಂಸಿಸುವವರಾಗಲಿ, ದುಃಖವು ಅವರ ಪ್ರಾರಬ್ಧವೆಂದು

ಕೊಂಡು ಕೈಕಟ್ಟಿ ಉಪೇಕ್ಷಿಸುವವರಾಗಲೀ, ಧಾರ್ಮಿಕರಾಗಿರುವ ದಂತಿರಲಿ, ಅವರು ಮಾನವರೂ ಅಲ್ಲ, ಅದೇಕೆ ಪಶುಗಳೂ ಅಲ್ಲ. ಅಯ್ಯೋ! ಹೀಗೆ ಹೆಂಗಸನ್ನು ಹಿಂಸಿಸುವರು, ಉಪೇಕ್ಷಿಸುವವರು ಒಂದೇ ರಕ್ತದ ತಂದೆ, ಅಣ್ಣ, ತಮ್ಮ ಮುಂತಾದವರೇ ಆದಮೇಲೆ ಈ ಮಾನವ ಸಮಾಜಕ್ಕೂ ದಾನವ ಸಮೂಹಕ್ಕೂ ಏನು ವ್ಯತ್ಯಾಸವೋ ತಿಳಿಯದು. ಅವರು ಬಹಿರಂಗವಾಗಿ ನಾಸ್ತಿಕರಾಗಿದ್ದುಕೊಂಡು ದೇವರನ್ನು ಅಲ್ಲಗಳೆದು ಸ್ವೇಚ್ಛಾಪ್ರವರ್ತಕರಾಗಿ ಸುಖದಲ್ಲಿ ನಿಮಗ್ನರಾಗಿದ್ದರು. ಇವರೋ ದೇವರು ಎಂಬ ಒಬ್ಬನನ್ನು ಢಾಲಾಗಿಟ್ಟುಕೊಂಡು ಶಂಖ ಘಂಟಾನಾದಗಳೊಡನೆ ಅವರ ಹಾಳು ಕೃತ್ಯಗಳನ್ನೇ ಮಾಡುತ್ತಾರೆ...ಇಷ್ಟೇ ವ್ಯತ್ಯಾಸ.

ವೆಂಕಮ್ಮ :—(ಪ್ರವೇಶ) ಬರುತ್ತಾ ಇದ್ದಾಳೆ. ನಿಮಗೆ ತಡ...ಮತ್ತು ಈ ದಿನವಾದರೂ ನೋಡುವ ಗಲಾಟೆಯೇಕೆ?

ರಮೇಶ :—ನೋಡಿದಿರಾ, ಒಬ್ಬರಿಗೂ ತಿಳಿಸುವುದಿಲ್ಲ ಎಂದು ಇದೇನೋ ಅವಸ್ಥೆ! ಎಷ್ಟೋ ಅಡಚಣೆಗಳನ್ನು ಇನ್ನೂ ನಾವು ನೋಡಿಕೊಳ್ಳಬೇಕಾಗಿದೆ.

[ರಮೆಯು ಕಾಫಿ ತರುತ್ತಾಳೆ]

ವೆಂಕಮ್ಮ :—ಕೊಡು ರಮಾ, ಆ ಕಾಫಿ ನಿನ್ನ......

ರಮೇಶ :—ಹೇಳುವದಲ್ಲ ಆ ಮಾತು.

ರಮಾ :—ಹೆಂಗಸರಿಗೆ ಬಾಯಲ್ಲಿ ಗುಟ್ಟು ಇರುವುದಿಲ್ಲವೆನ್ನುತ್ತಾರಷ್ಟೇ? ತಾಯಿಗೂ ಹೇಳಿ ಆಯಿತೋ ಮತ್ತೆ?

ರಮೇಶ :—ಆದರೆ-(ಕುಮುದೆಯು ಬರೋಣವನ್ನು ಕಂಡು) ಕುಮುದ! ಇವಳೇಕೆ ಬಂದಳು! ಇವಳ ಕಣ್ಣಿಗೆ ಬೀಳಬಾರದೀಗ. ವೆಂಕಮ್ಮಾ--ಬರುತ್ತೇನೆ.

[ಹೋಗುತ್ತಾನೆ.]

ಕುಮುದ :—ಏನು ವಿದ್ಯಾನಂದ ಸರಸ್ವತೀ-ಆಯಿತೇ ಅಲಂಕಾರ? ನಾಟಕ ಯಾವಾಗ ಶುರು ಮತ್ತೆ?

ರಮಾ :—ನೀನು ಇನ್ನೂ ಈ ಅಟ್ಟಹಾಸವನ್ನು ನೋಡಲಿಲ್ಲ. ಅದಕ್ಕೇ ನಿನಗೆ ತಮಾಷೆಯಾಗಿ ತೋರುತ್ತದೆ ಎಲ್ಲವೂ.

ಕುಮುದ :—ನಿನ್ನೆಯ ಅಲಂಕಾರವೇನೋ ವ್ಯರ್ಥವಾಯಿತು. ನಿನ್ನನ್ನು ಶೃಂಗರಿಸಿ ಹಾದಿನೋಡಿದ್ದೇ ಲಾಭ. ನಿನ್ನ ಆ ಪಶುಗಳ ಡಾಕ್ಟರ್ ಏನೋ ಬರಲಿಲ್ಲ.

ರಮಾ :—ನಡೆಯುತ್ತದೆ ಹೀಗೇ. ಪ್ರೇಕ್ಷಕರಿಲ್ಲ ಎಂದು ನೋಡಿದ ಮೇಲೆ ಅಲ್ಲವೆ ಬಟ್ಟೆ ಬರೆ ತೆಗೆದುಹಾಕುವುದು ನಾಟಕದಲ್ಲಿ? ಅಷ್ಟರ ವರೆಗೆ ಮೊದಲೇ ವೇಷಹಾಕಿ ಕೂತುಕೊಳ್ಳಬೇಕಷ್ಟೆ? ಮತ್ತು ಎಷ್ಟು ವಿಧವಾದ ವೇಷಗಳೆನ್ನುತ್ತೀಯಾ? ಹಳೇ ಭಟ್ಟರು ದೀಕ್ಷಿತರು ಆಚಾರ್ಯರು ಬರುತ್ತಾರೆ ಅಂದರೆ ಕೂದಲನ್ನು ಚೆನ್ನಾಗಿ ಬಿಗಿಯಾಗಿ ಎಳಕೊಂಡು, ಹಣೆಯಮೇಲೆ ಕಮಾನು ತೆಗೆದಂತೆ ಅದನ್ನು ಕಟ್ಟಿಕೊಳ್ಳಬೇಕು. ಭೂಗೋಳವನ್ನೇ ಹೊತ್ತುಕೊಂಡು ಹೋಗುತ್ತಾಳೋ ಎಂಬಂತೆ ಹಣೆಯಮೇಲೆ ಅಷ್ಟು ದೊಡ್ಡ ಬೊಟ್ಟು ಹಚ್ಚಿಕೊಳ್ಳಬೇಕು.

ಕುಮುದ :—ನಿಜವೇ ಸನಾತನ ಹೆಂಗಸರ ತಲೆಯಮೇಲಿರುವುದು ಭೂಗೋಳದ ಭಾರವೇ ಅಲ್ಲವೇ?

ರಮಾ :—ಒರಟು ಆಭರಣಗಳಲ್ಲಿ ಭಾರವಾಗಿದ್ದವುಗಳನ್ನೂ ಅಸಹ್ಯವಾಗಿದ್ದವುಗಳನ್ನೂ ನೋಡಿ ಹಾಕಿಕೊಳ್ಳಬೇಕು. ಮೇಲೆ ಸವರಿಸಿದ ಸೀರೆ, ಕಿವಿಗೆ ಬುಗುಡಿ, ಚಂದ್ರಮುರು, ಬೇಸ್ರಿ, ಮೂಗಿಗೆ ಮೂಗುತಿ, ಬುಲಾಕು......

ಕುಮುದ :—ಕುತ್ತಿಗೆಗೆ ಗೆಜ್ಜಡ್ಡಿಗೆ, ಗುಂಡಡ್ಡಿಗೆ, ಚಕ್ರಸರ, ಮಿಸ್ರಿಸರ, -ಅಂ-ಹೇಳು ಮುಂದೆ ಕೈಗೆ ಬಳೆ, ಮುಂಗೈ ಸರಪಣಿ, ತೋಡೆ,

ವಂಕಿ, ನಾಗಮುರ್ಗಿ; ಸೊಂಟಕ್ಕೆ ಗೆಜ್ಜೆ ಡಾಬು, ಅಂತೂ ಇಂತೂ ಕತ್ತೆಯ ಭಾರ ಹೊತ್ತುಕೊಂಡರೇನೇ ಸೌಭಾಗ್ಯ ಲಕ್ಷಣ ಕಂಡು ಬರುವದು ಅಲ್ಲವೇ? ಇನ್ನೂ ಹೇಳಲೆ-ಕಾಲಿಗೆ ಬೆಳ್ಳಿ ಬಂಧನಗಳು -ಅಲ್ಲ-ಆಭರಣಗಳು; ಮುಂದೆ ಸಂಸಾರದ ಭಾರವನ್ನು ಹೊರು ತ್ತಾಳೋ ಇಲ್ಲವೋ ಎಂದು ಮೊದಲೇ ಪರೀಕ್ಷೆಗಾಗಿ ಎಲ್ಲ ಹೀಗಿರ ಬಹುದು. (ಎಂದು ಸಗುತ್ತಾರೆ) ೧೦-೧೫ ಮಂದಿ ಗಂಡುಗಳು ಇಷ್ಟರವರೆಗೆ ನಿನ್ನನ್ನು ನೋಡಿಕೊಂಡು ಹೋಗಿರಬೇಕಷ್ಟೆ? ನೋಡಿದ ಕೂಡಲೆ ಏನು ತಿಳಿದುಕೊಳ್ಳುತ್ತಾರೋ ದಿವ್ಯದೃಷ್ಟಿ ಯುಳ್ಳ ಆ ವರದೇವರು! ತ್ರಿಕಾಲದರ್ಶಿಗಳು!!

ರಮಾ:—ಲೇಬಲ್ * ನೋಡಿ ವಸ್ತುವಿನ ಖರೀದಿ. ೧೦-೧೫ ಏನು? ಚೆನ್ನಾಗಿ ಲೆಕ್ಕವಿಟ್ಟಿದ್ದೇನೆ! ಈ ದಿನ ಬರುವವರು ೯೨ ನೇ ನಂಬರು. ಐದು ವರುಷಗಳಿಂದ ನಡಿಯುತ್ತಾ ಇದೆ ಈ ಪರೀಕ್ಷೆ.

ಕುಮುದ:—ಓಹೋ ಇನ್ನೂ ೮ ಕಡಿಮೆಯೋ? ಇಷ್ಟೆಲ್ಲಾ ಹೇಗೆ ಸಹಿ ಸಿದೆಯೋ! ಅಗೋ ಬಂದರು. ಇವರಿಬ್ಬರಲ್ಲಿ ನಿಮ್ಮಣ್ಣ ಯಾರು?

ರಮಾ:—ಕನ್ನಡಕ ಇಟ್ಟುಕೊಂಡವನೇ ನಮ್ಮಣ್ಣ, ನಡೆ ಒಳಗೆ!

[ಹೋಗುತ್ತಾರೆ-ಮೋಹನ, ಗುಂಡೂ, ಶಾಸ್ತ್ರಿ-ಪ್ರವೇಶ]

ಮೋಹನ:—ಬನ್ನಿ ಗುಂಡೂರಾಯರೇ. ಅಲಂಕರಿಸೀ ಪೀಠವನ್ನು, ಮಾವಾ-ರಮೆಯನ್ನು ಕರೆದುಕೊಂಡು ಬನ್ನಿ (ಶಾಸ್ತ್ರಿ ಹೋಗು ತ್ತಾನೆ)

ಗುಂಡೂ:—(ಆತನು ಕೂತುಕೊಂಡ ಕುರ್ಚಿಯು ಹಳೆಯದು. ಮೂಗು ಮುರಿಯುತ್ತ) ಒಡತನ...ಪಾಪ. ಎಲ್ಲಾ ಭಿಕ್ಷಾವಸ್ಥೆ. ಭಿಕ್ಷಾ ವಸ್ಥೆಯ ಚಿನ್ಹೆ.

ಮೋಹನ:—ಈ ಭಿಕಾರಿ ಸಾಮಾನಿನಲ್ಲಿ ನೀನೇನೋ ಕಸದಲ್ಲಿ ಬಿದ್ದ ಚಿಂತಾಮಣಿ! ಪಶು......

* Label

ಗುಂಡೂ :—ಮೋಹನ್–ಹೇಳುತ್ತೇನೆ ಕೇಳು. ಇಲ್ಲಿ ಪಶುಗಿಶು ಎಂದು ಕರೆಯಬೇಡ. ಎದ್ದು ಹೋಗಿಬಿಡುತ್ತೇನೆ ನೋಡು.

ಮೋಹನ :—ಇಲ್ಲಪ್ಪಾ, ಏನುಮಾಡಬೇಕು. ಅಳಿಯನೆಂದರೆ ಕೃಷ್ಣ... ಸರ್ಪ...ಅಲ್ಲ....ಅಪಾಯಕರವಾದ ವಸ್ತು.

ಗುಂಡೂ:—ಇನ್ನೊಂದು ಸಲ ಹೇಳುತ್ತೇನೆ ಸೋಡು, ಎದ್ದೆ.

ಮೋಹನ :—ಎಲೋ ತಮಾಷೆನೋ ! ಗೇಲಿಮಾಡುವುದು ಭಾವನ ಹಕ್ಕು ಅಲ್ಲವೇನೋ ?

[ಶಾಸ್ತ್ರಿ ರಮಾ ಕುಮುದಾ ಪ್ರವೇಶ–ವೆಂಕಮ್ಮ ಬಾಗಿಲ ಹಿಂದೆ ನಿಂತು ನೋಡುತ್ತಾಳೆ]

ನೀಲ :—ಬಾ, ರಮಾ, ಕುಮುದಾ, ನೀನೂ ಬಾ. ಕೂತುಕೊಳ್ಳಿ.

ಮೋಹನ :—(ಸ್ವ) ಇವಳು ರಮೇಶನ ತಂಗಿಯೇನೊ, ಬನ್ನಿ, ಕುಮುದಾ ದೇವಿ-ಕುರ್ಚಿಯಮೇಲೆ ಕೂತುಕೊಳ್ಳಿ.

[ಅಳಿಯು ಕೂತುಕೊಳ್ಳುತ್ತಾಳೆ.]

ಗುಂಡೂ :—(ಜೇಬಿನಿಂದ ಒಂದು ಪಟ್ಟಿಯನ್ನು ತೆಗೆದು) ಹುಂ ಈಗ ನಿನ್ನ ಹೆಸರೇನು ?

ರಮಾ :—ರಮಾ

ಮೋಹನ :—ಎತ್ತಿಕೊಳ್ಳುತ್ತ ಏಕವಚನ. ಸ್ತ್ರೀಲಿಂಗವಲ್ಲವೆ ? ನಡೀಲಿ.

ಗುಂಡೂ :—ತಂದೆಯ ಹೆಸರು ಸ್ವಲ್ಪ ಕೂಗಿಹೇಳಬೇಕು.

ರಮಾ :—ನೀಲಕಂಠಶಾಸ್ತ್ರಿ.

ಗುಂಡೂ :—ನೀವೆಷ್ಟು ಮಂದಿ ಮಕ್ಕಳು ?

ರಮಾ :—ನಾವೆಂಟುಮಂದಿ ಅಕ್ಕತಂಗಿಯರು.

ಗುಂಡೂ :—(ಸ್ವ) ೮ ಜನ ತಂಗಿಯರೋ ರಮೆಗೆ-ಅಬ್ಬಾ (ಪ್ರ) ಎಲ್ಲರೂ ಜೀವಂತರಾಗಿದ್ದಾರೋ?

ರಮಾ :—ಇದ್ದಾರೆ.

ಗುಂಡೂ :—(ಪಟ್ಟಿನೋಡುತ್ತಾ) ನಿಮ್ಮ ತಂದೆ ಇದ್ದಾರೋ ? ಇಲ್ಲವಾದರೆ ಎಷ್ಟನೇ ವರ್ಷಕ್ಕೆ, ಯಾವ ಕಾರಣದಿಂದ ಅಂದರೆ ಯಾವ ರೋಗ ದಿಂದ ಸತ್ತರು ?

ಮೋಹನ :—ಎಲೋ ಪಶೂ ನನ್ನ ಮಾವನ ಮಗಳು ಎಂದು ನಿನಗೆ ಗೊತ್ತಿದೆಯಲ್ಲವೇನೋ ?

ಗುಂಡೂ :—(ಸ್ವ) ಈ ಪಟ್ಟಿ ಗಲಾಟೆಮಾಡಿಬಿಟ್ಟಿತೇ ! ಇರಲಿ. (ಪ್ರ) ನಿನಗೆ ಓದು ಬರುತ್ತದೋ?

ರಮಾ :—ಉಂ.

ಗುಂಡೂ :—ಒಂದು ಪುಸ್ತಕ ತಾ ನೋಡೋಣ.

ರಮಾ :—(ಹೋಗಿ ಹತ್ತು ಹನ್ನೆರಡು ಪುಸ್ತಕಗಳನ್ನು ತಕ್ಕೊಂಡು ಬರುತ್ತಾಳೆ)

ಗುಂಡೂ :—(ಅವನ್ನು ನೋಡುತ್ತ-ಸ್ವಗತ) ಅದೇನು ಕುಮಾರ ಸಂಭವ! ಬೇಡಪ್ಪಾ. ಒಥೆಲ್ಲೊ ! ಅಬ್ಬಾ ! (ರಮೆಗೆ) ಯಾರ ಪುಸ್ತಕಗಳಿವು ?

ಕುಮುದ:—ಆವಳ ಪುಸ್ತಕಗಳೇ. ಹೆಂಗಸರು ಅಂದರೆ ಹಂಗಿಸುವುದೇನೋ? (ಸ್ವ) ಇದೇನೋ ಗಂಡಸುತನ ?

ಗುಂಡೂ :—ನನಗೆ ಕನ್ನಡ ಪುಸ್ತಕಗಳು ಬೇಕು. ಈ ಇಂಗ್ಲೀಷಿನ ಆಡಂಬರದಲ್ಲಿ ಹುಡುಗಿಯರು ಕನ್ನಡ ಓದುವುದನ್ನೇ ಬಿಟ್ಟು ಬಿಟ್ಟಿದ್ದಾರೆ. ಕನ್ನಡ ಪುಸ್ತಕ ತಾ ನೋಡೋಣ.

[ಕೆಲವನ್ನು ತರುತ್ತಾಳೆ ಒಂದನ್ನು ತೆಗೆದು ರಮೆಗೆ ಕೊಡುತ್ತಾನೆ]

ರಮಾ :—(ಓದುತ್ತಾಳೆ)

‘ ಗೃಹಾಲಂಕಾರವೇ ಗೃಹಿಣಿಯರ ಸೊಗಸು. ’

ಗುಂಡೂ :—ತಾಳು, ಗೃಹಾಲಂಕಾರವೆಂದರೇನು ?

ರಮಾ :—ಗೃಹ ಅಂದರೆ ಮನೆ, ಅಲಂಕಾರವೆಂದರೆ ಸೊಗಸು.

ಗುಂಡೂ :—ತಪ್ಪು...‘ಗೃಹ’ ಎಂದರೆ ನವಗ್ರಹಗಳ ಪೈಕಿ ಒಂದು. ‘ಲಂಕಾರ’ ಎಂದರೆ ಲಂಕೆಯಲ್ಲಿ ಹಿಡಿದಿದ್ದು-ರಾಮನನ್ನು.

ಮೋಹನ :—ಭೇಷ್ ! ಘನ ಪಂಡಿತ !

ಗುಂಡೂ :—(ಮೆಚ್ಚಿ) ಮುಂದೆ.

ರಮಾ :—(ಓದುತ್ತಾಳೆ) ‘ಏನೋ ಮಾಡದೇ ತೀರದು ಎಂದುಕೊಂಡು ಕೆಲಸವನ್ನು ನಿಟ್ಟುಸಿರುಬಿಡುತ್ತಾ ಮಾಡುವವರು ಗೃಹಿಣಿಯರಲ್ಲ. ಅಡಿಗೆಯೇ ಆಗಲಿ ಉಡಿಗೆ ತೊಡಿಗೆಯೇ ಆಗಲಿ ಕಲಾಯುತವಾಗಿರ ಬೇಕು.

ಗುಂಡೂ :—‘ಕಲಾ’ ಎಂದರೇನು ?

ರಮಾ :—ಕಲಾ ಎಂದರೆ–ಸುರಸ ವಿಕಾಸ, ಸಮರಸ ಪ್ರಕಾಶ.

ಗುಂಡೂ :—ಶುದ್ಧ ತಪ್ಪು. ‘ಕಲಿ’-ಸ್ತ್ರೀಲಿಂಗ. ‘ಕಲಾ’ ಪುಲ್ಲಿಂಗ.

ರಮಾ :—ಏನೋ......

ಗುಂಡೂ ;—ಏನೋ ಗೀನೋ ಒಂದೂ ಇಲ್ಲ. ನಿಮಗೇನು ಗೊತ್ತು ಹೆಂಗಸರಿಗೆ ? ಪುಸ್ತಕ ಇಟ್ಟು ಬಾ...(ಹೋಗುತ್ತಾಳೆ ಇವನು ಪಟ್ಟಿ ನೋಡುತ್ತ) ಸ್ವಲ್ಪ ಆಚೆಯಿಂದ ಈಚೆಗೆ ಹೋಗು. (ಸ್ವ) ಕುಂಟಿ ಅಲ್ಲ (ರಮೆಗೆ) ಹೀಗೆ ಮುಂದೆ ಬಾ. (ಆಕೆ ಬರುತ್ತಾಳೆ) ಸೂಜಿ-ನೂಲು-ಸರಿ. ಈ ಸೂಜಿಯೊಳಗೆ ನೂಲು ಹಾಕು.

ರಮೆ :—ಪೋಣಿಸುವಳು.

ಗುಂಡೂ :—(ಸ್ವ) ಕಣ್ಣು ಶುಭ್ರವಾಗಿದೆ.

[ಕಮಲಾ_ವಿಮಲಾ_ಪ್ರವೇಶ]

ಮೋಹನ :—ಏನು ಬಂದಿರೋ ಶಾಲೆಯಿಂದ? ಸುಮ್ಮನಿರಿ ಗದ್ದಲ ಮಾಡಬೇಡಿ.

ಗುಂಡೂ :—ಯಾರ ಮಕ್ಕಳು ಇವರು?

ಕುಮುದ :—ಇವರ ಪರೀಕ್ಷೆಯೂ ಆಗಬೇಕೋ? ಡಾಕ್ಟರ್ ಸಾಹೆಬ್, ಇವಳೊಬ್ಬಳೇ ಇರೋದು ನಿಕಾಲಿ ಮಾಡಲಿಕ್ಕೆ ಸ್ಟಾಕ್ ‡ ನಲ್ಲಿ.

ಗುಂಡೂ :—(ಪಟ್ಟಿ ನೋಡಿ) ಅಡಿಗೆ ಬರುತ್ತದೆಯೋ?

ವಿಮಲ-ಕಮಲ :—ಓಹೋ-ಚೆನ್ನಾಗಿ ಬರುತ್ತದೆ

ವಿಮಲ :—೧೫ ಮಂದಿ ನಿಮ್ಮಲ್ಲಿ ಇದ್ದರೂ ಮಾಡಿಹಾಕೇನು.

ಗುಂಡೂ :—(ರಮೆಗೆ) ನಿಮ್ಮ ನಾಡಿ ನೋಡೋಣ.

ವಿಮಲ :—ನಿಮ್ಮ ರೋಗಿನೋ ಇವಳು-ಈ ಬಡವನ? ಇನ್ನೂ ನಿಮ್ಮಲ್ಲಿ ಇನ್‌ಪೇಷಂಟ್ * ಆಗಲಿಲ್ಲವಷ್ಟೆ?

ಮೋಹನ :—ಸ್ತ್ರೀ ಜನ್ಮವಲ್ಲವೇ? ಬಡದನವೇ. ಎಲ್ಲರಲ್ಲಿಯೂ ಸಾಧಾರಣ ಅದೇ ಸ್ಥಿತಿ. ಹಾಗಿದ್ದವರಿಗೇ ಪತಿವ್ರತೆಯರೆನ್ನುವದು! ಆದರೆ ಸರಿ, (ಗುಂಡೂಗೆ) ನೋಡೋ, ನೋಡೋ, ಒದೆಯುವುದಿಲ್ಲ.

ಗುಂಡೂ :—ಎಷ್ಟೋ ದನಗಳನ್ನು ನಾನು ಮೆತ್ತಗೆ ಮಾಡಿದ್ದೇನೆ. ಸರಿ, ಈ ಹುಡುಗಿ ಚೆನ್ನಾಗಿದ್ದಾಳೆ. ಉಪ್ಪು ಬಿಡಿಸಲಿಲ್ಲವೋ ಏನೋ ಇವಳಿಗೆ.

ಕುಮುದ :—ಉಪ್ಪು! ಹೋ ತಿಳಿಯಿತು ಹುಡುಗಿಯರು ವಯಸ್ಸಿಗೆ ಬರುವ ಕಾಲಕ್ಕೆ ಅವರ ಬೆಳವಣಿಗೆಯಷ್ಟೇ ಕಡಿಮೆ ಮಾಡಲಿಕ್ಕೆ ಹಿರಿಯರು ಕೆಲವು ಕಡೆ ಉಪ್ಪು ತುಪ್ಪ ಬಿಡಿಸುವುದುಂಟು. ಇದೊಂದು

‡ 1 Stock * 2 In-patient

ರೂಢಿ. ಬಾಲ್ಯ ವಿವಾಹದ ಅವಸರ ಒಂದು. ದುಡ್ಡಿನ ಅಡಚಣೆ ಇನ್ನೊಂದು,

ವಿಮಲ :—ಇಂಥಾ ಒಳ್ಳೇ ಹುಡುಗರು ಸಿಕ್ಕುವದೂ ಅಪರೂಪ !

ಗುಂಡೂ :—ಸರಿ ರಮಾ. ಎರಡು ಮಿನಿಟು ನನ್ನನ್ನೇ ನೋಡು (ಗಡಿಯಾರವನ್ನು ನೋಡುತ್ತಾನೆ. ಆಕೆ ನೋಡುತ್ತಾಳೆ) ಈಗ ಹೇಳು. ನಿನ್ನೊಡನೆ ಲಗ್ನ ಫಿಕ್ಸ ‡ ಮಾಡಿದರೆ ಅಂದರೆ...ಹಚ್ಚಿದರೆ ಹ್ಯಾಗೆ ತೋರುವದು ನಿನಗೆ ?

ವಿಮಲ :—ಲಗ್ನ ಹಚ್ಚಿದರೆ-ಅದೇನು ಊಟದೆಲೆಯೋ ಹಚ್ಚಲಿಕ್ಕೆ ?

ಗುಂಡೂ :—ನೀನು ಮಾತಾಡಬೇಡ. (ರಮೆಗೆ) ಹೇಳು, ನಿನ್ನಲ್ಲಿ ನನಗೆ ಪ್ರೇಮವಿದೆಯೋ ? (ರಮೆಯು ಎದ್ದು ಹೋಗುತ್ತಾಳೆ. ಆತನು ನಗುತ್ತಾನೆ) ಹುಂ-ಪ್ರೇಮ ಇದೆ. ಆದರೆ ಹೇಳಲಾರದೆ ನಾಚಿಕೆಯಿಂದ ನಡೆದು ಹೋಗಿಬಿಟ್ಟಳು.

ನೀಲ :—ಅವಳನ್ನು ಏನು ಕೇಳುತ್ತೀರಿ ?

ಗುಂಡೂ :—ವಾಃ ಪ್ರೇಮದ ಜ್ವಾಲಾಮುಖಿಯ ಉದ್ಯೋಗ-ಅರ್-ಉದ್ವೇಗವಾದರೆ......

ಕುಮುದ :—ಉದ್ರೇಕವೋ-ಅಲ್ಲ-ಉದ್ವೇಗ ಅಂದಿರಿ. ಅರ್ಥವಾಗಲಿಲ್ಲ. ಅದಕ್ಕೇ ಕೇಳಿದೆ.

ಗುಂಡೂ :—ನಿನಗೇನು ಕನ್ನಡ ಗೊತ್ತು ? ಉದ್ವೇಗವೇ ಉದ್ವೇಗದಿಂದಲೇ ಲಗ್ನ ಸಫಲವಾಗುವದು ಪ್ರೇಮವು ನೋಡಿದ ಕೂಡಲೆ ಹುಟ್ಟಿದರೆನೇ ಲಗ್ನವಾಗುವ ಸಂಭವ. ಎಲ್ಲಾ ನಾಟಕಗಳ ಸಾರಾಂಶವೂ ಇಷ್ಟೇ. ವಿಚಿತ್ರವೇನು ಈ ನಾಟಕಗಳ ಚಿತ್ರ ? ನೋಡಿದ ಕೂಡಲೇ ಪ್ರೇಮವು ಹುಟ್ಟಬೇಕು. ನಾಟಕ ಮುಗಿಯುವುದರೊಳಗಾಗಿ ಮದುವೆಯೂ ಆಗಬೇಕು.

---

‡ Fix

ಕುಮುದ: --(ಮೋಹನನಿಗೆ) ಪ್ರೇಕ್ಷಕರನ್ನು ಉಪದೇಶವಿಲ್ಲದ ಉದ್ದೀಪಿಸುವ, ಗಂಡಹೆಂಡಂದಿರ ಉದ್ಯಾನವಿಲಾಸದ, ದುಡ್ಡು ಎಳೆಯುವ ಆಟಗಳೇ, ನಾಟಕ-ಎಂದು ತೋರುತ್ತದೆ ರಾಯರಿಗೆ.

ಮೋಹನ :--(ಕುಮುದೆಗೆ) ನಿಜವೇ...ಅಂತಹ ನಾಟಕ ಕರ್ತರಿಗೂ ಕಂಪನಿಗಳಿಗೂ ಇಂಥವರದೇ ಪ್ರೋತ್ಸಾಹ. ವಿವೇಕ, ಆದರ್ಶ, ಅವುಗಳಲ್ಲಿ ಎಲ್ಲವೂ ಶೂನ್ಯವೇ ಅಂದಮೇಲೆ (ಗಟ್ಟಿಯಾಗಿ ಗುಂಡೂಗೆ) ಇಂಥಾ ಮಹಾಶಯರನ್ನು ಮೆಚ್ಚಿಸಲಿಕ್ಕೆ ಅವರಂತೇ ಆಡುವುದು ಹಾಡುವುದು ಏನಾದರೂ ಇರಬೇಕಷ್ಟೆ.

ಗುಂಡೂ :--ವಿವೇಕವೋ ಆದರ್ಶವೋ, ಒಳ್ಳೇ ಷೋಕಾಗಿರಬೇಕು ನಾಟಕ. ದುಡ್ಡು ಕೊಟ್ಟು ಪಾಠ ಹೇಳಿಸಿಕೊಳ್ಳಬೇಕೇನೋ ನಾಟಕದವರಿಂದ. ಒಳ್ಳೇ ವಿಚಾರ !

[ರಮೆಯು ಕಾಫಿಯನ್ನು ತರುತ್ತಾಳೆ]

ಮೋಹನ :--ಗಾಯನಗೀಯನ ಬರುತ್ತದೋ ಇಲ್ಲವೋ ಎಂದು ಕೇಳಲಿಲ್ಲವೊ ?

[ಮೋಹನನು ಅಕೆಯನ್ನು ಹಾಡ ಹೇಳುತ್ತಾನೆ; ಎಲ್ಲರೂ ಕಾಫಿ ಕುಡಿಯುವಾಗ ರಮೆಯು ಹಾಡುತ್ತಾಳೆ. ಅಕೆ ಹಾಗೆ ಹಾಡುವಾಗಲೇ ಗುಂಡೂ ಕಾಫಿ ಕುಡಿದು ಆದಕೂಡಲೇ ಎದ್ದು ಹೊರಡುತ್ತಾನೆ.]

ಗುಂಡೂ :--ಬರುತ್ತೇನೆ. ವರದಕ್ಷಿಣೆಯ ವಿಷಯ ಮುಂದೆ ಹೇಳಿ ಕಳುಹಿಸುತ್ತೇನೆ.

[ಗುಂಡೂರಾಯನು ಹೊರಟುಹೋಗುತ್ತಾನೆ. ಶಾಸ್ತ್ರಿಯು ಅತನನ್ನು ಬಿಡಲಿಕ್ಕೆ ಹೋಗುತ್ತಾನೆ. ಹಿಂದೆಯೇ ಮೋಹನನೂ ಹೋಗುತ್ತಾನೆ.]

ವಿಮಲ :—(ಗುಂಡೂರಾಯನನ್ನು ನೋಡುತ್ತ) ಕೋಣದ ಮುಂದೆ ಕಿನ್ನರಿ ! ಹೋಗಲಿ ಪ್ರಾಣಿ. ಹ್ಯಾಗೂ ಸಂಜೆಯಾಗಿದೆ. ಭಜನೆ ಮಾಡೋಣ ಅಕ್ಕಾ. ಬಾರೆ ಕಮಲಾ.

[ಇಬ್ಬರೂ ಒಳಗೆ ಹೋಗಿ ವಾದ್ಯಗಳನ್ನೂ ಪುಷ್ಪ ಫಲ ಆರತಿಗಳನ್ನೂ ತಕ್ಕೊಂಡು ಬರುತ್ತಾರೆ. ಕುಮುದೆಯು ಭಜನೆಯ ಜಾಗೆಯನ್ನು ಸರಿಮಾಡಿ ಅದನ್ನಲಂಕರಿಸುತ್ತಾಳೆ. ಭಜನೆಯು ಆಗುತ್ತದೆ. ಆರತಿಯ ಕಾಲಕ್ಕೆ ಶಾಸ್ತ್ರಿಯು ಹಿಂತಿರುಗಿ ಬರುತ್ತಾನೆ. ಆತನಿಗೆ ಮೊದಲು ಆರತಿ ಯನ್ನು ಕೊಡುತ್ತಾರೆ. ಅದನ್ನು ಬೇಸರದಿಂದ ಆತನು ತಕ್ಕೊಂಡು ಬಿಟ್ಟು ಒಂದು ಕುರ್ಚಿಯಮೇಲೆ ಧಡಕ್ಕನೆ ಕೂತುಬಿಡುತ್ತಾನೆ. ಹುಡು ಗಿಯರೆಲ್ಲರೂ ಹೂವನ್ನು ಹಂಚಿಕೊಂಡಮೇಲೆ ಹೋಗುತ್ತಾರೆ. ಹಾಗೆ ಯೇ ಗುಂಡೂರಾಯನ ನಿರ್ಧಾರವನ್ನು ಗಂಡನಿಂದ ಕೇಳಲಿಕ್ಕಾಗಿ ಆತು ರಳಾಗಿ ವೆಂಕಮ್ಮನೂ ಬರುತ್ತಾಳೆ.]

ವೆಂಕಮ್ಮ :—ಏನಾದರೂ ಗಿಟ್ಟಿತೇ ನಮ್ಮ ಯೋಗ್ಯತೆಗೆ ಸರಿಯಾಗಿ?

ನೀಲ :—ಗಿಟ್ಟುವದೇನು? ಹಣೇಬರಹ !......ಕಡೆಗೆ ಈ ಆಶೆಯೂ ಹಾಳಾಯಿತು. ಅಷ್ಟು ದೊಡ್ಡ ಗಂಟು ಎಲ್ಲಿಂದ ತರಲಿ? ಒಬ್ಬ ಮಗಳೇ ಆಗಿರುತ್ತಿದ್ದರೆ ಈ ವರದಕ್ಷಿಣೆಯ ಕಷ್ಟ ಅಷ್ಟಿರುತ್ತಿರಲಿಲ್ಲ... ...ಅಬ್ಬಬ್ಬಾ......ಗುಂಡೂರಾಯರ ಅಂಕೆಯು ಕಠಾರಿಯಂತಾ ಗಿದೆ. (ವೆಂಕಮ್ಮ ಹೋಗುತ್ತಾಳೆ. ಶಾಸ್ತ್ರಿಯು ಮೈಮುರಿತು) ಎಂತಹ ವಜ್ರಾಘಾತ !...ಉಂ...ಇದರಲ್ಲೇನು? ಇಂಥಾ ಸಾವಿ ರಾರು ವಜ್ರಾಘಾತಗಳನ್ನು ತಿಂದು ನನ್ನ ಮನಸ್ಸೇ ವಜ್ರಕ್ಕಿಂತ ಘಟ್ಟಿಯಾಗಿದೆ. ಈಗ ಬೇರೆ ಹಾದಿ ನೋಡಬೇಕು...ಅದೆಲ್ಲಿ?... ಆ ಪೆನ್ಶನರ ಕಾಲ್ಬುಡ. ಅಯ್ಯೋ ನನ್ನ ರಮೆಯನ್ನು ಮುದುಕನಿಗೆ ಕೊಡಲೋ? ಯಾವ ರಮೆಗೆ ಮುದ್ದಿಡುತ್ತಾ ಮುದ್ದು ಮುದ್ದಾದ ಬುದ್ಧಿವಾದಗಳನ್ನು ಕಲಿಸಿರುವೆನೋ, ಯಾವ ಹುಡುಗಿಗಾಗಿ ನನ ಸಕಲ ಚಿಂತೆಗಳನ್ನು ಮರೆಯುತ್ತಿದ್ದೆನೋ, ಯಾವ ಹುಡುಗಿಯಿಂದ ಒಂದಾದರೂ ನಿಷ್ಠುರ ಶಬ್ದವು ಹೊರಟು ನನ್ನ ಮನಸ್ಸು ನೋಯ್ನು ಲಿಲ್ಲವೊ, ಅಂಥಾ ನನ್ನ ಕಣ್ಣಿನ ಗೊಂಬೆಯಾದ ಸುಗುಣ ಸಂಪನ್ನೆ ಯನ್ನು ಮಣ್ಣಿನ ಪಾಲಾಗಿ ಮಾಡಲೊ? (ಗಾಬರಿಯಿಂದ) ಮುದುಕ ನಾಗಿದ್ದರೂ ಮೂಢ ಪ್ರಪಂಚದಲ್ಲಿ ಮದುವಣಿಗನೆಂಬ ಮರ್ಯಾದೆ ಯಿಂದ ಮೆರೆಯುವ ಮೃತ್ಯುವಿನ ಮಾಯಾರೂಪಕ್ಕೆ ಮೋಹಿಸಿ

ಮಗಳಿಗೆ ಮರಣ ಮಾರ್ಗವನ್ನು ತೋರಿಸಲೋ! ನನ್ನ ರಮೆಗೆ ......ಛೆ-ಛೆ-ಕೂಡದು. ಆದರೆ ಬೇರೇನುಗತಿ? ನಾನೀ ವೃದ್ಧಾಚಾರಕ್ಕೆ ಇದಿರಾಗಲಿಕ್ಕೆ ಸಿದ್ಧನಾದರೂ...ಪಾಪ...ಆ ಹುಡುಗಿಯ ಗತಿಯೇನು?

ಮದುವೆ ಇಲ್ಲದ ಪ್ರೌಢ ಕನ್ಯೆಗೆ ಮೂರ್ಖ ದುಷ್ಟರಿಂದಾಗುವ ನಿಂದೆಯು ಸಾಮಾನ್ಯವೋ? ಎಂಟೊಂಭತ್ತು ವರುಷದ ಹುಡುಗಿಯರನ್ನೇ ನೋಡಿ ಎಷ್ಟು ಬೆಳದಿದ್ದಾಳಪ್ಪಾ, ಎಂದು ಕೂಗುವ ಹಾಳು ಸಮಾಜವಿದು. ಸಮಾಜವೇನು? ತಂದೆ ತಾಯಿಗಳು ಇಷ್ಟಮಿತ್ರರು ಬೇಕಾದವರು ಎಲ್ಲರೂ ಇಡುವ ಗೋಳು ಒಂದೇ.

(ಭ್ರಮಿಸಿ) ಮುಂದೆ ತಮ್ಮ ದುಃಖವನ್ನು ಹುಡುಗಿಯ ಮೇಲೆ ಸಿಟ್ಟಿನ ರೂಪದಿಂದ ತೋರಿಸುವುದು! ಎಷ್ಟೋ ಮಂದಿ ಪಂಡಿತರು ಸಹ ತಮ್ಮ ಕ್ರೂರ ಪಾಂಡಿತ್ಯವನ್ನು ಹೀಗೆಯೇ ತಮ್ಮ ಹೆಣ್ಣು ಮಕ್ಕಳ ಮೇಲೆಯೇ ತೋರಿಸುತ್ತಾರೆ! ಅಯ್ಯೋ ನಾರೀ ಜನ್ಮವೇ ನಿನಗೆ ನಿನ್ನ ತಾಯಿ ತಂದೆಗಳು ಸಹಾ ವೈರಿಗಳೋ? ತಂದೆ... ತಾಯಿ......ಯಾರಿಗೆ ಯಾರು! ಸಮಾಜದಲ್ಲಿ. ಈ ದ್ವಿಪಾದ ಪಶು ಸಮೂಹದಲ್ಲಿ ತಮ್ಮ ಮಾನ ಒಂದುಳಿದರೆ ಸಾಕು. ಅವರಲ್ಲಿರುವುದು ಮೃಗಗಳ ಮೋಹ, ಮಾಯೆ, ಮನುಜರ ಪ್ರೇಮವೇ ಅಲ್ಲ. ಸಮಾಜಭೀತಿಗೆ ಮಕ್ಕಳ ಪ್ರೀತಿಯೆಂದು ಕರೆಯುವುದೂ ದೊಡ್ಡ ಮೋಸ. ಪಾಪ ಹುಡುಗಿಯರಿಗೆ ಯಾರು ಗತಿ? ಕಟ್ಟಕಡೆಗೆ ನೆರೆಹೊರೆಯವರ ಮತ್ತು ತಂದೆ ತಾಯಿಯರ ಧರ್ಮಹಿಂಸೆಗಿಂತಲೂ ಒಬ್ಬ ಮುದುಕನ ಆಶ್ರಯವೇ ಒಳ್ಳೆಯದು ಎಂದು ಅವಳಿಗೆ ಸಹಜವಾಗಿಯೇ ತೋರುತ್ತದೆ. ಕಷ್ಟವನ್ನು ತಪ್ಪಿಸಿ ಕೊಳ್ಳುವದಕ್ಕೆ ಮಾಡಿದ ಉಪಾಯಕ್ಕೆ ಮೇಲೆ ಇಷ್ಟವಾದ ವಿವಾಹ ವೆಂಬ ಶುಭನಾಮ! ಬೋನಿನಿಂದ ಹೊರಟು ಬೆಕ್ಕಿನ ಬಾಯಿಗೆ ಬಿದ್ದ ಇಲಿಗೂ ಬೆಕ್ಕಿಗೂ ಸರಸ ಸಲ್ಲಾಪವೇ ಅಲ್ಲವೇ ಮತ್ತೆ!! ಮುಂದೆ ಮತಿಯಿಲ್ಲದ ಕವಿಗಳ ಕಾವ್ಯಕ್ಕೆ ಈ ಗತಿಯಿಲ್ಲದವರ ಪಾತ್ರ

ವ್ರತ್ಯವೇ ಮುಖ್ಯ ವಿಷಯ ! ಸುಧಾರಕರೇ-ಎಲ್ಲಿ ನಿಮ್ಮ ವೂರುದ್ಧ ಮಾತಿಗೆ ಸರಿಯಾದ ಕೆಲಸ?

ನೀವೂ ಅನುಕೂಲತೆಯನ್ನು ನೋಡುವ ಹೇಡಿಗಳೇ.

ಏನಿದು!...ನಾನು ಯೋಚಿಸುತ್ತಿರುವುದು...ಬುದ್ಧಿಯ ಶಬ್ದ ಸರಣಿ...ಇದರಿಂದ ಆ ನನ್ನ ರತ್ನಕ್ಕೇನು ಹಿತವಾಗುವುದು ?...... ಬುದ್ಧಿಗೇನು ? ನ್ಯಾಯಾನ್ಯಾಯ ವಿತರ್ಕವೊಂದೇ. ಆದರೆ ಕಾರ್ಯ ರಂಗದಲ್ಲಿಯೋ-ಸಾಧ್ಯಾಸಾಧ್ಯ ವಿಚಾರವನ್ನು ಮಾಡಬೇಕು.

(ಆಲೋಚಿಸುತ್ತ) ಮುದುಕ ಸತ್ತನು - ಎಂದಿಟ್ಟುಕೊಳ್ಳೋಣ- ನಮ್ಮಲ್ಲಿ ಎಷ್ಟೋ ಮಂದಿ ಬಾಲ ವಿಧವೆಯರಿಲ್ಲವೋ? ಅವರಿಗೆ ಸಂತೋಷವೇ ಇಲ್ಲವೋ? ಅದರಲ್ಲೂ ವಿದ್ಯಾವತಿಯಾದ ನನ್ನ ರಮೆಗೆ ಅವಳ ಜ್ಞಾನವೇ ಶಾಂತಿಯನ್ನೀಯದಿರುವುದೇ? ಅವಳ ಜ್ಞಾನದ ಪರೀಕ್ಷೆಯು ಅವಳಿಂದಲೇ ಆಗಬೇಕು. ಸ್ತ್ರೀಪುರುಷರೀ ರ್ವರಿಗೂ ಆದರ್ಶವೆಂದರೆ ಮುಕ್ತಿ. ಮುಕ್ತಿಗೆ ಬೇಕಾದ್ದು ಜ್ಞಾನ; ಮತ್ತು ಕಷ್ಟದ ಪುಟಗಳನ್ನು ಕಂಡ ಜ್ಞಾನವಲ್ಲವೇ ಅಪರಂಜಿ? ರಮೆಯ ಹಿತವು ಈ ರೀತಿ ಏಕಾಗಬಾರದು ?

ವೆಂ :--(ಪ್ರವೇಶ) ಹೀಗೆ ತಲೆಯಮೇಲೆ ಕೈಯಿಟ್ಟು ಕೂತರೇನುಗತಿ ?

ನೀ :--ನಾಲ್ಕು ಹೆಣ್ಣು ಮಕ್ಕಳನ್ನು ಯಾವಾಗ ಆ ದೇವರು ಕೊಟ್ಟನೋ ಆ ದಿನವೇ ಕೈಯನ್ನು ಕಿರೀಟವನ್ನಾಗಿಯೂ ಮಾಡಿದ್ದಾನೆ.

ವೆಂ :--ಗುಂಡೂರಾಯರ ವಿಷಯ ಏನಾಯಿತು ?

ನೀ :--ಆಗುವುದೇನು ? ಉತ್ತರ ಒಂದೇ--ವರದಕ್ಷಿಣೆ! ಹರಿಶ್ಚಂದ್ರನಂತೆ ನಮ್ಮನ್ನೇ ನಾವು ಮಾರಿಕೊಂಡು ಋಣಮುಕ್ತರಾಗೋಣ, ಎಂದರೆ ಮನುಷ್ಯರನ್ನು ಮಾರುವ ಕೊಂಡುಕೊಳ್ಳುವ ಆ ದಿನಗಳು ಈಗೆಲ್ಲಿವೆ ! ಈಗ ಪುಣ್ಯಕ್ಕಾಗಿ ಹುಡುಗಿಯನ್ನು ದಾನ ಮಾಡಿದರೂ

ದಕ್ಷಿಣೆ ಇಲ್ಲದೆ ದಾನಸ್ವೀಕಾರಮಾಡುವ ಗಡ್ಡಮಿಾಸೆಯ ಗಂಡು ಗಳೇ ಇಲ್ಲ. ಅಯ್ಯೋ! ನಮ್ಮ ಸನಾತನ ಧರ್ಮವೇ!

ವೆಂ:--ಅವಳ ಹಣೆಯಬರಹವೇ ಹಾಗಿರಬಹುದು. ಮುಂದೆಲ್ಲಿ ನೋಡು ವುದು ?

ನೀ:--ಒಬ್ಬ ಮುದುಕನನ್ನು ನೋಡಲೇನು ?

ವೆಂ:--ಅಯ್ಯೋ !! ಏನು ಉತ್ತಮವಾದ ಮಾತು-- !

ನೀ:--ಇನ್ನೇನು ಮಾಡೆನ್ನುತ್ತೀ ? ಭಿಕ್ಷುಕರಿಗೆ ಯಾರುಗತಿ ?

ವೆಂ:--ದೇವರೇ--ನನ್ನದೊಂದು ಮಾತುಕೇಳಿ-ಅಂದರೆ. ಶಿವರಾಯರನ್ನು ಕೇಳಿ ನೋಡಬಹುದಲ್ಲವೆ ಒಂದು ಸಲ ?

ನೀ:--ಹುಚ್ಚರ ಆಸ್ಪತ್ರೆಯಲ್ಲಿ ಹಾಕಿಬಿಟ್ಟಾರು ಎಲ್ಲಿಯಾದರೂ ನಿನ್ನನ್ನು.

ವೆಂ:--ರಮೇಶರಾಯರನ್ನೇ ಕೇಳಿದರೆ ?

ನೀ:--ಒಪ್ಪಿಕೊಂಡರು ಎಂದಿಟ್ಟುಕೊ.

ವೆಂ:--ಮತ್ತೇನು ! ಭಂಗಾರಕ್ಕೆ ಒಪ್ಪೆಯೋ.

ನೀ:--ಹರಹರಾ ! ಬೇರೆಯವರ ಮನೆಯನ್ನು ಒಡೆಯುವ ಪ್ರಯತ್ನವನ್ನು ನಾನು ಮಾಡಬೇಕೋ ?

(ಸ್ವ) " ಸ್ತ್ರೀ ಬುದ್ಧಿಃ ಪ್ರಲಯಾಂತಿಕಾ " ಸರಿ.

ವೆಂಕಮ್ಮ:--ಮನೆಮುರಿಯುವುದೋ ? ಅದೆಲ್ಲಿಂದ ಬಂತು ? ನಾವೇನು ಬಲಾತ್ಕಾರದಿಂದ ಒಪ್ಪಿಸುವವರೋ ?

ನೀಲ:--ಹಾಗಲ್ಲವಾದರೆ ಅದರ ಪರಿಣಾಮವೆಷ್ಟು ಕೆಟ್ಟದಾದೀತು ಗೊತ್ತೋ ? ಶಿವರಾಯರ ಮತವಿರುದ್ಧ ಅವರ ಮಗನ ಲಗ್ನವನ್ನು ಬೆಳೆಸಿದರೆ ಕೂಡಲೆ ಮನೆಗೆ ಸಾಷ್ಟಾಂಗ ಹಾಕಬೇಕಾದೀತು ಅವನಿಗೆ.

ವೆಂಕಮ್ಮ :—ಯಜಮಾನರನ್ನು ಅವರು ಒಪ್ಪಿಸಿಕೊಂಡರೆ ?

ನೀಲ :—(ಒತ್ತಿ) ಒ......ಪ್ಪಿ......ಸಿ ಕೊಂಡರೆ; ಆದರೆ ಹೋದರೆ ಹತ್ತಿ ಬೆಳೆದರೆ, ಅಜ್ಜೀ ನಿನಗೊಂದು ಪಟ್ಟೆಸೀರೆ—ಎಂಬ ಗಾದೆಯಂತೆ ನೋಡು ನಿನ್ನ ಮಾತುಗಳು !

ವೆಂಕಮ್ಮ :—ಅಷ್ಟೇನು ಅಸಾಧ್ಯವೊ ?

ನೀಲ:—ನಿನಗೆ ಗೊತ್ತಿಲ್ಲ ಅವರ ಗುಣ. ಅವರು ಜಮೀನದಾರರು. ಅವರ ಮಿಷ್ಟಭಾಷಣವನ್ನು ಕೇಳುತ್ತ ಕೂತರೆ ನಾವಲ್ಲಿಗೆ ಹೋದದ್ದು ಏಕೆ ಎಂಬದು ಸಹಮರೆತು ಹೋಗುವುದು. ಬೆಣ್ಣೆಯಿಂದ ಕೂದಲು ತೆಗೆದ ಹಾಗೆ ಅವರ ಮಾತು ಗೊತ್ತೊ ?

ವೆಂಕಮ್ಮ :—ನಾವೂ ಹಾಗೆಯೇ ಮಾತನಾಡಬೇಕು.

ನೀಲ :—ನಾವು ಹುಡುಗಿಯ ಕಡೆಯವರು ಎಂಬುದನ್ನು ನೀನು ಮರೆತೇ ಬಿಡುತ್ತೀಯಲ್ಲಾ. ಹುಡುಗನ ಕಡೆಯವರು ಬೇಕಾದ್ದನ್ನು ಮಾತಾಡಬಹುದು.

ವೆಂಕಮ್ಮ :—ಅದೆಲ್ಲಾ ಇರಲಿ ಈ ಹುಚ್ಚಿಗಾಗಿಯಾದರೂ ಒಂದು ಸಲ ಮಾತಾಡಿ ನೋಡಬಾರದೇ ?

ನೀಲ :—ಇಷ್ಟರ ವರೆಗೆ ಆದ ಅವಮಾನಕ್ಕೆ ಬೆಲೆ ಇಲ್ಲವಾದರೆ...ಸರಿ... ಇನ್ನೂ ನಾಲ್ಕು ಲತ್ತೆಗಳನ್ನು ತಿಂದು ಬರುತ್ತೇನೆ ರಾಯರ ಕಡೆಯಿಂದ.

[ಮೋಹನ ರಮೇಶರ ಪ್ರವೇಶ]

ಮೋಹನ:—ಮಾವ, ಯಾರ ಲತ್ತೆಗಳು ?

ನೀಲ :—ವರನ ಲತ್ತೆಗಳು, ಅವರಪ್ಪನ ಒದೆಗಳು ! ಇನ್ನಾರವು ? ಹುಡುಗರ ತಂದೆಯವರು, ದೇವರಿಗೆ ಸಮಾನರು. ಭೃಗುವಿನ ಲತ್ತೆ ತಿಂದು ವಿಷ್ಣುವು - ಪಾಪ - ಆ ಋಷೀಶ್ವರನ ಕಾಲಿಗೆಲ್ಲಿ ನೋವಾ

ಯಿತೋ ಎಂದುಕೊಂಡು ಒತ್ತಿದಂತೆ, ನಾವೂ ಅವರುಗಳು ಒದ್ದರೆ ಮತ್ತೂ ಅವರ ಕಾಲನ್ನು ಒತ್ತಬೇಕು. ವಿಷ್ಣುವಿಗೆ ಸರಿಯಾದೆವೋ ಇಲ್ಲವೋ ನೋಡು.

ಮೋಹನ:—ನಿಮ್ಮ ನಿಷ್ಮೊಳಗೇನು ಭೇಧ ? ಅವನು ಕ್ಷೀರಸಾಗರದಲ್ಲಿದ್ದರೆ ನೀವು ದುಃಖಸಾಗರದಲ್ಲಿರುತ್ತೀರಿ. ಅವನಿಗೆ ವೈಕುಂಠದ ಅರಮನೆ ಯಾದರೆ ನಿಮಗೆ ಈ–ಈ ಶುಂಠರ ನೆರೆಮನೆ--ಅಲ್ಲ--ಸೆರೆಮನೆ ಇದ್ದೇ ಇದೆ. ಆ ಭಕ್ತರು ಆತನ ಲೀಲಾಸ್ತುತಿಯೊಳಗೆ ಲೀನರಾದರೆ ಈ ಭುಕ್ತರು ನಿಮ್ಮ ನಿಂದಾಚ್ಯುತಿಯೊಳಗೆ ಲೋಲರಾಗಿರುತ್ತಾರೆ.

ನೀಲ :—ರಮೇಶರಾವ್, ನಮ್ಮ ಹುಡುಗನು ನಿಜವಾದ ಕವಿ ಹೌದೋ ಅಲ್ಲವೋ ? ನೋಡಿದಿರೋ–ನನಗೆ ಪ್ರಾಣದಂತಿವೆ ಇವನ ಮಾತು-ಗಳು.

ರಮೇಶ:—ನಿಜವೇ ಅವನ ಶಕ್ತಿ ಏನು ಹೇಳಬೇಕು ? ದುರ್ಬಲವಾದ ನನ್ನ ಮನಸ್ಸನ್ನು ಹುರಿದುಂಬಿಸಿದವನಿವನೇ.

ನೀಲ :—(ಆಶ್ಚರ್ಯಗೊಂಡು) ನೀವೋ ಉದಾಸೀನರಾಗಿದ್ದಿರಿ! ಏಕೆ ? ನಿಮಗಂಥಾ ಸ್ಥಿತಿಯಲ್ಲಿ ದೇವರು ಇಟ್ಟಿಲ್ಲವಲ್ಲಾ !

ರಮೇಶ :—ಅದನ್ನೇ ಹೇಳಲಿಕ್ಕೆ ಇಲ್ಲಿಗೆ ಬಂದಿದ್ದೇನೆ.

ವೆಂಕಮ್ಮ;—(ಸ್ವ) ಕಂಟಕಗಳೆಲ್ಲಾ ಹಾಳಾಗಲಿ !! (ರಮೇಶನಿಗೆ) ಏನು ವಿಶೇಷ ?

ರಮೇಶ :—ಹೇಳಲಿಕ್ಕೆ ನಾಲಿಗೆಯೇ ಅಲ್ಲಾಡುವುದಿಲ್ಲ.

ವೆಂಕಮ್ಮ :—ಎಲ್ಲರೂ ಕ್ಷೇಮವಾಗಿದ್ದಾರಷ್ಟೇ ?

ರಮೇಶ:—ಹೌದಮ್ಮಾ.

ಮೋಹನ :—ಎಲೋ ‘ ಅತ್ತೆ ’ ಅನ್ನೋ ಸರಿಯಾಗಿ.

ನೀಲ :—ನಿನ್ನತ್ತೆ ರಮೇಶರಾಯರಿಗೂ ಅತ್ತೆಯಾಗುವುದು ಹೇಗೋ ?

ಮೋಹನ :—ಇದೆ ನಮ್ಮ ನಮ್ಮ ಮಾತು...ಹೀಗೇ. ಇನ್ನೂ ನಿರ್ಧಾರವಾಗತಕ್ಕದ್ದು.

ರಮೇಶ :—ನೀನೇ ಹೇಳೋ. ನನಗೆ ನಾಚಿಗೆಯಾಗುತ್ತದೆ.

ಮೋಹನ :—'ನಾಚಿಕೆ' ಅನ್ನಲಿಕ್ಕೆ ನಾಚಿಕೆಯಾಗುವುದಿಲ್ಲವೇನೋ ನಿನಗೆ? ಗಂಡಸೇ ಹೇಳೋ?

ರಮೇಶ :—ಸರಿ ಶಾಸ್ತ್ರಿಗಳೇ ನಾನು ನಿಮ್ಮ ಹುಡುಗಿ...ತಿಳಿಯಿತಷ್ಟೇ...

ಮೋಹನ :— ನಿಜವೇ ನೀನೀಗ ಹುಡುಗಿಯೇ ಸರಿ.

ರಮೇಶ —(ಧೈರ್ಯ ತಂದುಕೊಂಡು) ನಾನು ರಮೆಯ ಪಾಣಿಗ್ರಹಣದ ಯಾಚನೆಗಾಗಿ ಬಂದಿದ್ದೇನೆ.

ಮೋಹನ :—ಓಹೋಹೋ ಭಲೆ! ಸಂಸ್ಕೃತ ಪದಗಳ ಪಟಾಕಿ! ಸರಿ. ಮಾನ ಹೆಚ್ಚು ಅವಕ್ಕೆ! ...ಉಂ ಮುಂದೆ. ಬಾಣ ಬಿರುಸು ಹೊಡಿ.

ನೀಲ :—ನಿಮ್ಮ ಯಜಮಾನರ ಸಮ್ಮತಿಯಿಂದ ಹೇಳುತಿದ್ದೀರೋ?

ರಮೇಶ :—ಇಲ್ಲ.

ನೀಲ :—ನಿಮ್ಮ ಯಾಚನೆಯು ವ್ಯರ್ಥ ಹಾಗಾದರೆ.

ರಮೇಶ :—ಈಗ ಸಮ್ಮತಿಯಿಲ್ಲವಾದರೂ ಮುಂದದನ್ನು ಪಡೆಯುವ ನಂಬಿಕೆ ಇದೆ.

ನೀಲ :—ಈ ಒಂದು ವಿಷಯ ಅನಂತರವೇ ಮಾತಾಡಬಹುದಲ್ಲವೆ ಮತ್ತೆ.

ಮೋಹನ :—(ಸ್ವ) ಭೇಷ್, ನಮ್ಮ ಮಾವ!

ರಮೇಶ :—ನನ್ನದೊಂದು ವಿನಂತಿ ಇದೆ.

ನೀಲ :—(ಬೇಸರದಿಂದ) ಈಗ ಈ ವಿಷಯವೇ ಸಾಕುಮಾಡಿ.

ರಮೇಶ :—ಮೋಹನ್, ಈಗೇನು ಮಾಡುವುದು ?

ಮೋಹನ :--ಏನು ಮಾಡುವುದು ?

ರಮೇಶ :--ಶಾಸ್ತ್ರಿಗಳೇ, ಲಗ್ನಮಾಡಿಕೊಂಡರೆ ರಮೆಯೊಡನೆಯೇ ಎಂದು ಪ್ರತಿಜ್ಞೆಮಾಡಿಕೊಂಡಿದ್ದೇನೆ.

ಮೋಹನ :--ಅದಕ್ಕೇನು ಅಡ್ಡಿ ? ಇನ್ನೇನು ಬಾಕಿ ? ಶುಭಮಂಗಲ ಸಾವಧಾನ್. ತನ್ನಿ ನಿಮ್ಮಿಬ್ಬರ ಕೈ; ಅನ್ನಿ ಧರ್ಮೇಚ, ಅರ್ಥೇಚ, ಕಾಮೇಚ ನಾತಿಚರಾಮಿ.

ನೀಲ :--ಏನು ಮಕ್ಕಳಾಟ ?

ಮೋಹನ :—ಮಗುವೇ ಅಲ್ಲವೇ ನಾನು ಮಾವಾ ? ನಾನು ಮಕ್ಕಳಾಟ ವನ್ನು ಮಾಡದಿದ್ದರೆ ಇನ್ನಾರು ಮಾಡಬೇಕು ಮತ್ತೆ ? ಮಕ್ಕಳಾಟ ದಿಂದ ಉಪಮನ್ಯುವಿಗೆ ಕ್ಷೀರಸಾಗರವು ಪ್ರಾಪ್ತವಾಯಿತು, ಮಕ್ಕ ಳಾಟದಿಂದಲೇ ಧ್ರುವನಿಗೆ ಅಚಲಾನಂದ ಪದವಿಯು ಲಭಿಸಿತು. ಮಕ್ಕಳಾಟದಿಂದಲೇ ಪ್ರಹ್ಲಾದನ ಪ್ರೇಮ ಪ್ರಭಾವವು ಸ್ತಂಭದಿಂದ ನಾರಾಯಣನನ್ನೇ ಹೊರಡಿಸಿತು, ಮಕ್ಕಳಾಟದಿಂದಲೇ ಮುದ್ದು ಕೃಷ್ಣನು ಸಾವಿರಾರು ಗೋಪಿಯರನ್ನು ಆನಂದಗೊಳಿಸಿ ಭವಸಾಗರ ದಿಂದ ಕಾಪಾಡಿದನು. ನನ್ನ ಮಕ್ಕಳಾಟದಿಂದ ಮಾವಾ... ಈ ನಿರ್ದೋಷಳಾದ ಕನ್ಯೆಯಾದರೂ ಭಯಸಾಗರದಿಂದೇಕೆ ಪಾರಾಗ ಬಾರದು ?

ನೀಲ :—ಅದಕ್ಕೆ ಕಾಲ ಸಂದರ್ಭಗಳನ್ನೆಲ್ಲಾ ನೋಡಬೇಕಪ್ಪಾ ?

ಮೋಹನ :—ಇದೇ ಆ ಕಾಲ ಅಂಥ ಹೊತ್ತು ಇನ್ನು ಮುಂದೆ ಬರು ವುದಿಲ್ಲ. (ರಮಾ ರಮೇಶರಿಗೆ) ತನ್ನಿ ನಿಮ್ಮ ಕೈಯನ್ನು-ಈ ಸುಭ ದ್ರೆಗೂ ಈ ಅರ್ಜುನನಿಗೂ ಗಂಟುಹಾಕುವ ಕೃಷ್ಣ ಮೋಹನನು ನಾನೇ. ಶುಭವಾಗಲಿ, ಆನಂದವಾಗಲಿ (ಎಳೆಯುತ್ತಾನೆ.)

ನೀಲ :—ಸಾಕು-ಸಾಕು ಈ ಬುದ್ಧಿವಂತಿಕೆ.

ಮೋಹನ :—ಅದೇನಿಲ್ಲ. ಈ ಲಗ್ನವು ಆದಂತೆಯೇ. ನಿರ್ದೋಷಿ, ನಿಸ್ವಾರ್ಥ ಮಾನವನ ಮಾತೇ ವೇದಮಂತ್ರ. ದಕ್ಷಿಣೆಯು ನಿರೀಕ್ಷಣದಲ್ಲಿ ಒದರಿದ ಮಂತ್ರದಿಂದೇನು ಫಲ! ಡಾಂಭಿಕರ-ಸ್ವಾರ್ಥಮಯ ಭಾವಕ್ಕೆ ಪ್ರೇಮ ಪ್ರಭಾವವು ಎಲ್ಲಿಂದ ಹ್ಯಾಗೆ ಬಂದೀತು? ಮಾವಾ, ವಿಘ್ನವಿಲ್ಲದ ಲಗ್ನವಿದು. ಶಿವರಾಯರನ್ನು ಮುಂದೆ ನೀನೇ ಕೇಳಿಕೋ.

ನೀಲ ;—ದುಡ್ಡಿಲ್ಲದೆ ದೊಡ್ಡವರೊಪ್ಪುವುದಿಲ್ಲವಲ್ಲಾ......

ಮೋಹನ :—ಅದೇನಿಲ್ಲ - ನೀವೆಲ್ಲಾ ಚೆನ್ನಾಗಿ ಹೇಳಿರಿ. ರಮೇಶನೂ ನಾಲ್ಕುಮಾತುಗಳನ್ನು ಹೇಳುವನು. (ರಮೇಶನಿಗೆ) ಏನೋ ನ್ಯಾಯವಾದ್ದನ್ನು ಹೇಳಲಿಕ್ಕೆ ಹಿರಿಯವರು ಕಿರಿಯವರು ಏನೋ ಅದರಲ್ಲಿ?

ನೀಲ :—ನಾಲ್ಕು ಮಾತು ಏಕೆ? ಮೊದಲು ನಾಲ್ಕು ಸಾವಿರ ರೂಪಾಯಿಗಳ ಛನಾಛನ್ ಶಬ್ದದಿಂದಲೇ ರಾಯರ ಕಿವಿಯನ್ನು ತೆರೆಯಬೇಕಾಗಿದೆ.

ಮೋಹನ :—ಏನುಮಾಡಬೇಕು? ಮಾವಾ ಈ ಈಗಿನ ಬ್ರಾಹ್ಮಣರ ದುರಾಚಾರದ ಸೆಳವಿನಲ್ಲಿ ಬಿದ್ದು ಮುಣುಗುವುದಕ್ಕಿಂತ ಬೇರೆ ಯಾವ ಜಾತಿಯಲ್ಲಾದರೂ ಹುಟ್ಟುವುದುತ್ತಮ. ಪಶುಪಕ್ಷಿ ಜಾತಿಯಾದರೂ ಉತ್ತಮ. ಅತ್ತೇ-ಇದಕ್ಕೇ ನೋಡು ಅನೇಕರು ನಮ್ಮ ತಿರುಳಿಲ್ಲದ ಹುರುಳಿಲ್ಲದ ಹಿಂಸಾತ್ಮಕ ರೂಢಿಯ ಮೂಢ ಜಾತಿಯನ್ನು ಬಿಟ್ಟು ಬೇರೆ ಜಾತಿಯನ್ನು ಸೇರುವದು. ಪರಾಗವಿಲ್ಲದ ಪುಷ್ಪದಿಂದೇನುಪಯೋಗ? ಗಂಧವಿಲ್ಲದ ಒಣ ಬಣ್ಣವು ಮಣ್ಣಿಗೂ ಇದೆ ಹುಣ್ಣಿಗೂ"ಇದೆ. ಆದರೆ ಬಣ್ಣಕ್ಕಾಗಿ ಹುಣ್ಣನ್ನು ಮೂಸಿ ಮುದ್ದಿಡುವ ಮಂದಮತಿಗಳ್ಯಾರು? ನಮ್ಮ ಈ ಕಾಲದ ಧರ್ಮ, ಜೀವಿತಕ್ಕೇ ಹತ್ತಿದ ಹುಣ್ಣು. ಧನಕ್ಕಾಗಿ ಜ್ಞಾನಮಾನ

ಗಳನ್ನು ಬಿಟ್ಟು ಹೆಜ್ಜೆ ಹೆಜ್ಜೆಗೂ ಲಜ್ಜೆಯನ್ನು ಬಿಟ್ಟು ಧನಿಕರಿಗೆ ತಲೆಬಾಗಿಸುವವನು ಬ್ರಾಹ್ಮಣನೋ? ವಿರಾಗಾನುರಾಗಗಳಿಂದ ವಿರಾಜಿಸುವವನೇ ವಿಪ್ರನು. ಭಯಬದ್ಧನಾದೀಗಿನ ನಿರ್ವೀರ್ಯ ತಸ್ಕರನೆಲ್ಲಿ? ಭವಭಂಜನನಾದಾಗಿನ ವೀರ ಭಾಸ್ಕರನೆಲ್ಲಿ! ಸಂಬಂಧ ವೇನು? ದಯಾದಾಕ್ಷಿಣ್ಯವಿಲ್ಲದ ಸಮಾಜವು ಯಾರಿಗೆ ತಾನೇ ಆಕರ್ಷಕವಾದೀತೋ! ಅಯ್ಯೋ ಅಧೋಗತಿಯೇ!

ನೀಲ :—ಅದೇನಪ್ಪ?

ಮೋಹನ :—ಹೀಗೆ ಮಾಡೋಣ ಮಾವಾ. ನೀವಿಬ್ಬರೂ ಶಿವರಾಯ ರಲ್ಲಿಗೆ ಹೋಗಿ ಮಾತನಾಡಿ.

ನೀಲ :—ಎಲೋ, ರೂಪಾಯಿ ಎಲ್ಲಿಂದ ತರಬೇಕೋ ನಾನು?

ಮೋಹನ :—ನಾಲ್ಕು ಸಾವಿರ ಕೊಡುವ ಜವಾಬ್ದಾರಿ ನಾನು ವಹಿಸಿ ಕೊಳ್ಳುತ್ತೇನೆ.

ರಮೇಶ :—ಕನ್ನ ಕೊರೆಯುತ್ತಿಯೇನೋ ಸುಳ್ಳಾ.

ಮೋಹನ :—ನಿರಾಶನಾಗಬೇಡ ಕುಳ್ಳಾ. ನೀನೂ ನನ್ನ ಕೂಡ ಇರುತ್ತೀ.

ನೀಲ :—ಏನೋ ಅದು?

ಮೋಹನ :—ಅದೆಲ್ಲಾ ನಿಮಗೇಕೆ? ನಡೆಯಿರಿ ನಮ್ಮ ಕೂಡ. ಆಗು ವುದಾಗುತ್ತದೆ. ಒಂದು ವೇಳೆ ಆಗುವುದಿಲ್ಲಾ ಅಂತ ತಿಳಿಯಿರಿ. ರಮಾ, ನಿನ್ನ ಕಡೆಯಿಂದ ಕೂಲಿ ಒಂದು ಕಪ್‌ಕಾಫಿಯಾದರೂ ವಸೂಲು ಮಾಡುತ್ತೇನೆ ನೋಡು, ನನ್ನ ಕೆಲಸಕ್ಕೆ. ನಡಿಯಮ್ಮಾ ರಮಾ, ಕಾಫಿ ಮಾಡಿಕೊಡು ಬಾ. ಈ ಶ್ರೀಮಂತರಿಗೆ ನಮ್ಮ ಬಡ ವರ ಕಾಫಿಯ ರುಚಿಯನ್ನಾದರೂ ಒಂದು ಸಾರಿ ತೋರಿಸಿಬಿಡೋಣ. ಬಾರೋ ರಮೆಯು ಮಾಡಿದ ಕಾಫಿಯನ್ನು ಕುಡಿಯೋಣ ಬಾ.

[ಎಲ್ಲರೂ ಹೋಗುತ್ತಾರೆ. ಪರದೆಯು ಬೀಳುತ್ತದೆ.]

## ೧ನೆಯ ಅಂಕ—ದೃಶ್ಯ ೪.

**[ಈ ನೋಟವನ್ನು ಆಡುವವರಿಗೆ ಅನುಕೂಲವಿಲ್ಲದ್ದಲ್ಲಿ--ಪೂರ್ತಿಯಾಗಿ ಬಿಟ್ಟು ೨ನೆಯ ಅಂಕಕ್ಕೆ ಹೋಗಬಹುದು.]**

[ಶಿವರಾಯರ ದಿವಾನಖಾನೆ. ಸಂಜೆಯ ಹೊತ್ತು. ಹೊರಗೆ ಒಬ್ಬ ಜವಾನನು ಚಿಲುಮೆಯಲ್ಲಿ ಹೊಗೆಸೊಪ್ಪು ಸೇದುತ್ತಾ ಕೆಮ್ಮುತ್ತಾ ಕೂತಿರುತ್ತಾನೆ. ರಾಯರು ಒಳಗಿನಿಂದ ಬಂದು ಅಲ್ಲಿ ಒಂದು ಗೂಟಕ್ಕೆ ಹಾಕಿರುವ ದುಸ್ತನ್ನು ಹಾಕಿಕೊಂಡು ಒಂದು ಬೆತ್ತವನ್ನು ಹಿಡಕೊಂಡು ಹೊರಡುತ್ತಾರೆ.]

ಶಿವ :—(ಜವಾನನಿಗೆ) ನಾನು 'ಲೆಕ್ಚರ್'ಗೆ ಹೋಗಿಬರುತ್ತೇನೆ. ಜಾಗ್ರತೆಯಾಗಿ ನೋಡಿಕೊ.

ಜವಾನ :—[ಕೈಜೋಡಿಸಿ ತಲೆಯನ್ನಾಡಿಸಿಯೇ ವಿಧೇಯತೆಯನ್ನು ಸೂಚಿಸುತ್ತಾನೆ. ಅಲ್ಲಿಂದ ಮೇಜು ಕುರ್ಚಿಯನ್ನು ತನ್ನ ಧೋತ್ರದಿಂದಲೇ ಸ್ವಚ್ಛಗೊಳಿಸುತ್ತಾನೆ. ಅನಂತರ ಕೂತು ಮತ್ತೆ ಚಿಲುಮೆ ತುಂಬಿಕೊಂಡು ಸೇದುತ್ತಾನೆ.]

ಮೋಹನ :—[ಪ್ರವೇಶ]

ಜವಾನ :—(ಆತನನ್ನು ನೋಡಿ ಅವಸರದಿಂದ ಏಳುತ್ತಾ ಚಿಲುಮೆಯನ್ನು ಕೆಳಗೆ ಹಾಕಿಬಿಟ್ಟು ಬಾಗಿಲಕಡೆ ಓಡುತ್ತಾ) ನಿಮ್ಮ ಹಾದಿ ನೋಡಿಕೊಂತಾ ಕುಂತಾರೆ. ರಾವ್‌ಜೀ, ಚಿಕ್‌ದಣೇ (ಕೂಗುತ್ತಾ) ದಣೇ ...ಚಿಕ್‌ದಣಿಯೋರೆ!-ಡಾಗ್ತರ್ ಬಂದಾರೆ ದಾಗ್ತರ್ !

ರಮೇಶ :—[ಒಳಗಿನಿಂದ ಬಾಗಿಲು ತೆರೆದು ಬರುತ್ತಾನೆ.]

ಮೋಹನ :—ನಮಸ್ತೆ - ರಮೇಶ್.

ರಮೇಶ :—ನಮಸ್ಕಾರ ಮೋಹನ್. ಹೊತ್ತು ನೋಡಿ ಬಂದ ಹಾಗಾಯಿತು, ನೋಡು. ಅಪ್ಪಾ ಈಗಲೇ ಹೊರಗೆ ಹೋದಾ.

ಮೋಹನ :—ನೋಡಿದೆ ದೂರದಿಂದ ದಾರಿಯಲ್ಲಿ.

ರಮೇಶ :—ಕೊಡು ಕೊಳ್ಳೋಣ ಬಾ (ಜವಾನನು ಚೀಲವಿಯನ್ನು ಎತ್ತಿ ಕೊಂಡು ಹೋಗುತ್ತಾನೆ)

ಮೋಹನ :—ಮೋರೆ ಯಾಕೋ ಹೀಗಾಗಿದೆ? ಮೈ ಚೆನ್ನಾಗಿಲ್ಲವೇನು ನಿನಗೆ?

ರಮೇಶ :— ಮೈಯಲ್ಲ, ಮನಸ್ಸು ಚೆನ್ನಾಗಿಲ್ಲ.

ಮೋಹನ :—ಏನು ಬಂತಪ್ಪಾ ನಿನಗೆ?

ರಮೇಶ :—ನೋಡು, ನಿಮ್ಮಲ್ಲಿ ನಿನ್ನೆದುರಿಗೆ ಏನೇನೋ ಆಡಿಬಿಟ್ಟೆ ಆ ಹೊತ್ತು. ಮನೆಗೆ ಬಂದಮೇಲೆ ತೋಚಿತು ನೋಡು ಅದರ ಕಷ್ಟ. ಹೇಗಪ್ಪ! ಆ ಹುಲಿಯು ನನ್ನಪ್ಪನ ಬಾಯಿಗೆ ಬೀಳುವುದು?

ಮೋಹನ :—ಎಂತಹ ಗಂಡಸೋ ನೀನು! ನ್ಯಾಯವಾದದ್ದನ್ನು ಮಾಡು ವುದಕ್ಕೆ ಹೆದರಿಕೆ ಯಾಕೋ? ಏನು ಮಾಡಿಯಾರು ಯಾರಾದರೂ? ಮನೆಯಿಂದ ಓಡಿಸಿಬಿಟ್ಟಾರು ಬಹಳವಾದರೆ. ಅದಕ್ಕೇನು ಭಯ! ಬಿ. ಎ. ಪ್ಯಾಸಾಗಿ ನಿನಗೆ ಇಬ್ಬರ ಹೊಟ್ಟೆ ನೋಡಿಕೊಳ್ಳಲಿಕ್ಕೆ ಆಗು ವುದಿಲ್ಲವೇನೋ?

ರಮೇಶ :—ಅದೇನೋ ಆಗುತ್ತದೆ. ಆದರೆ ಪಿತೃದ್ರೋಹಿಯಾಗುವುದು ಹ್ಯಾಗಪ್ಪಾ? ಹೆಂಡತಿಗಾಗಿ ಅಪ್ಪನನ್ನು ಬಿಟ್ಟು ಬಿಟ್ಟಾ ಎಂದು ಪ್ರಪಂಚವೆಲ್ಲಾ ಹೇಳುವುದು. ನಿಜಸ್ಥಿತಿ ಅವರಿಗೇನು ಗೊತ್ತು. ಒಳಗಿನ ಗುಟ್ಟನ್ನು ತಿಳಿದುಕೊಳ್ಳದೆ ಮೇಲೇ ಬಾಯಿಗೆ ಬಂದಹಾಗೆ ಬೊಗಳುವವರೇ ನಮ್ಮಲ್ಲಿ ಹೆಚ್ಚು. ವೈದ್ಯರೇನು, ವಕೀಲರೇನು, ಮಾಸ್ತರರೇನು, ಪಂಡಿತರೇನು ತಮ್ಮ ಹೊಟ್ಟೆಯ ಪಾಡು ಮುಗಿ ಯಿತೋ, ಹಾಳು ಹರಟೆಗಳು! ಬೇರೆಯವರ ನಿಂದೆ ಹರಟಲಿಕ್ಕೆ ಷುರು! ಯಾವ ಸ್ಥಿತಿ ನಿಜವಾದದ್ದು, ಯಾವ ಸ್ಥಿತಿ ಸುಳ್ಳಾದುದು ಎಂದು ನೋಡುವ ಯೋಗ್ಯತೆಯೋ ಇಲ್ಲ, ಬುದ್ಧಿ ಇಲ್ಲ, ಅಷ್ಟೇಕೆ ಅದು ಬೇಕೆಂಬ ಇಚ್ಛೆಯೂ ಇಲ್ಲ! ನಮ್ಮ ಸುಟ್ಟ ಸಮಾಜಕ್ಕೆ-ಹರಟೇಮಲ್ಲರೂ ದೊಡ್ಡ ಮನುಷ್ಯರೇ! ಆ ಪಾಪಿಗಳಿಗೆ ಹೆಂಗಸರ

ನಿಂದೆ ಎಂದರೆ ಇನ್ನೂ ಸಂತೋಷ. ಮೇಲೆ ನೋಡಿದಿರೋ ಈಗಿ ನವರ ವಿದ್ಯೆಯ ಪ್ರಭಾವ! ಎಂದು ನಮ್ಮ ಶಿಕ್ಷಣಕ್ಕೆ ಕಳಂಕ ಹಚ್ಚ ಲಿಕ್ಕೂ ಪೂರ್ವಾಚಾರದವರು ಸಿದ್ಧರೇ! ಮಗ ದೊಡ್ಡ ಮನುಷ್ಯ ನಾಗಲಿ ಎಂದು ಆಶಿಸಿ, ಹರಸಿ ಶಾಲೆಗೆ ಕಳುಹಿಸುವವರೂ ಅವರೇ!

ಮೋಹನ:—ಹೌದು. ಕಡೆಗೊಂದು ಗುಮಾಸ್ತಿಕೆಯಾದರೂ ಬರಲಿ ಎಂದು. ಮಕ್ಕಳ ಆಟ! ಮುಂದೆ ಓದಿದ ಫಲ - ಮಾಟ! ಅವರಿಗೆ ಹೀಗಾಗಿದೆ-ಆ ಗುಂಪಿಗೆ ಸೇರಿದ ಗೂಬೆಗಳಿಗೆ! ಅದೆಲ್ಲಾ ಇರಲಿ. ನಿನಗೇಕೆ ಅವರ ಭಯ! ಪರಿಸ್ಥಿತಿಗನುಸಾರವಾಗಿ ಸಮಾಜವು ಹೇಗೆ ಬದಲಾಗಬೇಕು ಎಂದು ವಿಚಾರಮಾಡುವವರ ಮಾತು ಸ್ವಲ್ಪ ವಿಚಾರಿಸಿ ನೋಡತಕ್ಕದ್ದೆಂಬುದು ನಿಜವೇ. ಅದೇನಿಲ್ಲ! ತಮ್ಮ ಕುಲ, ತಮ್ಮ ಹೆಂಡತಿ, ತಮ್ಮ ಹೊಲ, ತಮ್ಮ ಸಂಗತಿ, ತಮ್ಮ ಮಕ್ಕಳು ಮನೆ, ದುಡ್ಡು ದುಗ್ಗಾಣಿ, ಹುಲ್ಲುನೆಲ್ಲು ಬಿಟ್ಟು ಮುಂದಕ್ಕೆ ಯಾರ ಬುದ್ಧಿಯೇ ನಡೆಯುವುದಿಲ್ಲವೋ ಅಂಥವರ ಮಾತನ್ನು ತಕ್ಕೊಂಡೇನುಮಾಡುತ್ತೀ? **ವ್ಯಕ್ತಿ ಸಮಾಜವನ್ನು ಗೌರವಿಸ ಬೇಕಾದರೆ ಸಮಾಜಕ್ಕೂ ಸ್ವಲ್ಪ ವ್ಯಕ್ತಿಯ ಸುದ್ದಿ, ಹಿತಚಿಂತ ನಗಳಿರಬೇಕೋ ಬೇಡವೋ?** ಆದರೆ ಮೂರ್ಖರು ಸಮಾಜ ವೆಂದರೆ ತಮ್ಮ ಒಂದು ಸಣ್ಣ ಕುಲಮಾತ್ರಕ್ಕೇ - ಸ್ಮಾರ್ತರೋ, ಲಿಂಗ ವಂತರೋ, ಮಾಧ್ವರೋ, ಶ್ರೀ ವೈಷ್ಣವರೋ-ತಮ್ಮ ಸಣ್ಣ ಪಂಗ ಡಕ್ಕೇ ಸಮಾಜವೆಂಬ ಸುಳ್ಳು ಹೆಸರನ್ನಿಟ್ಟುಕೊಂಡು ಸ್ವಾರ್ಥವನ್ನೇ ಸಾಗಿಸಿಕೊಳ್ಳುತ್ತಾ ಇದ್ದಾರೆ. ಸಮಾಜ ಅಂದರೆ ಜಾತಿ, ಕುಲಗಿಲ ಎಲ್ಲಿಂದ ಬಂತದರಲ್ಲಿ? ಬ್ರಾಹ್ಮಣರೆಂದುಕೊಂಡಿರುತ್ತಾರಲ್ಲಾ ಅವರು, ಶೂದ್ರರು, ಹೊಲೆಯರು, ಗಂಡಸರು, ಹೆಂಗಸರು, ಎಲ್ಲರೂ ಬಂದ ರದರಲ್ಲಿ. ಆದರೆ ನಮ್ಮ ಸಂಘಕ್ಕೆ ಈ ಭಾವವಿದೆಯೋ? ನಿನ್ನಂಥ ವರ ಹಿತ ಅಂಥ ಜಂಭದ ಕೋಳಿಗಳಿಂದಲೇ ಹಾಳಾಗುವುದು ನೋಡು. ಅವರ ಕೂಗನ್ನು ಏನು ಕೇಳುತ್ತೀಯೋ?

ರಮೇಶ:—ನನಗಿದೇ ಸಂಕಟ ನೋಡು. ಅಪ್ಪನಿಗೆ ಒಂದೇ ಧ್ಯಾನ-ವರದಕ್ಷಿಣೆ ಎಷ್ಟು ತಕ್ಕೊಳ್ಳಬೇಕು, ನಮ್ಮ ದೊಡ್ಡಸ್ಥಿಕೆಯನ್ನು

ಹೇಗೆ ಮೆರೆಸಬೇಕು-ಇದೇ ಎಲ್ಲಾ ಆತನ ಮನಸ್ಸಿನಲ್ಲಿ.

ಮೋಹನ :—ಬಿ. ಎ. ಪಾಸಾದನೆಂದರೆ ದುಡ್ಡಿನ ಗುಡ್ಡವೇ ಎಂದು ತಿಳಿದುಕೊಂಡಿದ್ದಾರೆ ನೋಡು ಈ ಮೂರ್ಖರು. ಎಮ್. ಎ. ಬಿ. ಎಲ್. ಪ್ಯಾಸಾಗಿಯೂ ಕೊತ್ತಂಬರಿ, ಮೆಂತೆ ಕಟ್ಟು ಕೂಡ ಸಂಪಾದಿಸುವುದು ಅನೇಕರಿಗೆ ಕಷ್ಟ! ಆದರೂ **ಹುಡುಗನು ವರನಾದನೋ ಅವನ ಮೊದುಳಿಗಿಲ್ಲದ ಬೆಲೆ ಮೀಸೆಗೆ ಬರುತ್ತದೆ**!! ನಮ್ಮ ಹುಡುಗನಿಗೆ ಅಷ್ಟು ಸಾವಿರ ದುಡ್ಡು, ಇಷ್ಟು ಬೆಳ್ಳಿ, ಬಂಗಾರ, ದೋತ್ರ, ಶಾಲು ಗೀಲು-ಅಬ್ಬಬ್ಬ-ಮದುವೆ ಕಾಲ ಬಂತೆಂದರೆ ಮೀಸೆ ಇದ್ದವನು ಮಹಾಲಕ್ಷ್ಮಿಯ ಮಗನೇ ನೋಡು. ಮೊದ್ದಾಗಿದ್ದರೂ ಮದುವಣಿಗನೇ! ಏನೇ ಅಂದುಕೊಳ್ಳಲಿ. ಈಗ ಸಂಘ ಹಿತಕ್ಕಾಗಿ ಮೇಲ್ಪಂಜ್ತು ಹಾಕುವ ಹೊತ್ತು. ನಮ್ಮಂಥ ಸುಶಿಕ್ಷಿತರಾದ ಯುವಕರು ಇದನ್ನೆಲ್ಲಾ ಮಾಡುವುದಿಲ್ಲವಾದರೆ ಮತ್ತ್ಯಾರು ಮಾಡಬೇಕೊ? ನಾವು ಮಾಡಬೇಕಾದ್ದನ್ನು ಮಾಡಿದರೇನೇ ಆ-ಆ ಆಡುಗಳ ಮೋರೆಯು ಬಾಡುವುದು. ತಿಳಿಯಿತೋ?

[ಕುಮುದೆಯು ಕಿಟಕಿಯ ಹತ್ತಿರವೇ ಕಂಡು ಕಾಣದಂತಿರುತ್ತಾಳೆ]

ರಮೇಶ :—ನಾನಾಗಿ ಕೇಳಲೋ? ಸರಿ. ಕೇಳಿದೆ ಎಂದು ಇಟ್ಟುಕೊ. ಅಪ್ಪನಿಗೆ ಸಮ್ಮತವಾಗಬೇಕಷ್ಟೇ.

ಮೋಹನ :—ಎಲೋ ಮೂರ್ಖ, ನ್ಯಾಯವಾದದ್ದನ್ನು ಮಾಡುವವರೇ, ಮಾಡಿಸುವವರೇ ದೊಡ್ಡವರು. ದೊಡ್ಡ ಪದವಿ ಮುಂತಾದ ಹೆಡ್ಡತನಕ್ಕೆ ಬಲಿಬಿದ್ದ ನಿಮ್ಮಪ್ಪ ಆ ಹುಡುಗಿಯ ವಿಷಯ ಏನೆಂದಾನೋ. ಅಪ್ಪನ ಸಮ್ಮತಿಯಂತೆ! ನಿಮ್ಮಪ್ಪನ ಮದುವೆಯೋನೋ ಈಗ?

ರಮೇಶ :—ಏನುಮಾಡಲಿ, ನನಗೇನೋ ಧೈರ್ಯವಾಗುವುದಿಲ್ಲ.

ಕುಮುದ :—(ಒಂದು ಬಳೆಯನ್ನು ಹಿಡಕೊಂಡು ಇದಿರಿಗೆ ಬಂದು) ಈ ಬಳೆ ಸ್ವಲ್ಪ ಇಟ್ಟುಕೊಂಡು ನೋಡು.

ಮೋಹನ :—ಒಳ್ಳೇ ಸಮಯದಲ್ಲಿ ಬಂದಿರಿ.

ಕುಮುದ :—ಕ್ಷಮಿಸಿ, ನೀವು ಇಬ್ಬರೂ ಇಲ್ಲಿ ಕೂತಾಗಲೇ ನನಗೆ ಗೊತ್ತು. ಏನೋ ರಹಸ್ಯವಿದೆ ಎಂದು ಹಾಗೆಯೇ ನಿಮ್ಮ ಹಿಂದೆಯೇ ಬಂದುಬಿಟ್ಟೆ.

ಮೋಹನ :—ಸರಿ, ರಮೇಶನನ್ನು ಹುರಿಗೊಳಿಸಲಿಕ್ಕೆ ಯಾರಾದರೂ ಬೇಕಾಗಿತ್ತು ಒಳ್ಳೆಯ ಹೊತ್ತಿಗೆ ಬಂದಿರಿ. ನನ್ನ ಮತವೇನೋ ಗೊತ್ತಷ್ಟೆ ನಿಮಗೆ?

ಕುಮುದ :—ಮತವೇನೋ, ಇನ್ನೂ ಕಾರ್ಯವಾದಮೇಲೆಯೇ ಅದರ ಯೋಗ್ಯತೆಯು ತಿಳಿಯುವದು ನಿಮಗೆ. (ರಮೇಶನಿಗೆ) ಅಣ್ಣಾ ಯಾಕೆ ಬಿ. ಎ. ಪಾಸುಮಾಡಿದಿ? ಸರ್ಟಿಫಿಕೇಟನ್ನು ಕದ್ದಿಯೋ? ಉಚ್ಚ ಶಿಕ್ಷಣದಿಂದ ನೀನು ಕಲಿತದ್ದು ಇಷ್ಟೇನೋ! ನೀತಿ ಧರ್ಮವೆಂಬುದರ ಅರ್ಥವಾದರೂ ಗೊತ್ತಿಲ್ಲವೆ ನಿನಗೆ! ಪತ್ರ ಬರೆಯುವದಕ್ಕೆ ಮಾತ್ರ ಬರುತ್ತದೋ ನಿನಗೆ!-ಹಾಗೆ ಮಾಡುತ್ತೇನೆ, ಹೀಗೆ ಮಾಡುತ್ತೇನೆ, ಹೆಂಗಸರ ಉದ್ಧಾರವನ್ನು ಹೇಗೆ ಮಾಡಬೇಕು ಎಂದು ಮಾರುದ್ದ ಲೆಕ್ಚರ್ ಹೊಡೆಯುತ್ತೀ ಅಲ್ಲವೋ! ಮಾಡುವ ಕಾಲ ಬಂದರೆ ಮೂತಿ ಇಷ್ಟುದ್ದ ಮಾಡುತ್ತೀಯಲ್ಲಾ ಮತ್ತೆ!

ರಮೇಶ :—ಕುಮುದಾ, ನನ್ನ ಅಡಚಣೆಗಳು ನಿನ್ನ ತಲೆಯಲ್ಲಿ ಹೊಕ್ಕುವುದೇ ಇಲ್ಲಾ. ಅಪ್ಪನು ಮನೆಯಿಂದ ಹೊರಕ್ಕೆ ತಳ್ಳಿದರೆ ನನಗೇನೂ ದುಃಖವಿಲ್ಲ, ನನ್ನ ತ್ಯಾಗವೇ ಆ ಹುಡುಗಿಯ ನಿಂದೆಗೆ ಮೂಲವಾದೀತೇ ಮೂರ್ಖ ಪ್ರಪಂಚದಲ್ಲಿ; ಎಂಬದೊಂದೇ ದಿಗಿಲು ನೋಡು.

ಕುಮುದ :—ಅವರಿಗಾಗಿ ನೀನೇನು ಕರಗಿಯುತ್ತೀ. ಜನರು ಹೀಗೂ ಅನ್ನುತ್ತಾರೆ ಹಾಗೂ ಅನ್ನುತ್ತಾರೆ. ನೋಡು ಯಾವಾಗ ಮೆಟ್ಟಲಾದ ಸಂಸಾರ ಆದರ್ಶವಾಯಿತೋ, ಗಂಡಸರಿಗೆ ಹೆಂಗಸರಲ್ಲಿ ಕರ್ತವ್ಯಕ್ಕಿಂತಲೂ ಹಕ್ಕು ಹೆಚ್ಚಾಯಿತೋ, ಹೆಂಡತಿಗೆ ಗುಣ

ಕ್ಕಿಂತಲೂ ಗಂಡನೇ ಪ್ರಿಯನಾದನೋ, ಆಗಲೇ ಗುಣಪೂಜೆಯು ಮುಣುಗಿ ಹೋಗಿ ಹಣದ ಪೂಜೆಯು ಪ್ರಾರಂಭವಾಯಿತು ಅಂಥಾ ಪೂಜಾರಿಗಳಿಗೆ ಬಜಾರಿ ಹರಟೆಗಳೇ ಮುದ್ದು. ನಿನಗೂ ಅಷ್ಟೇನೊ!

ಮೋಹನ :—ರಮೇಶ! ಶಿವರಾಯರಿಗೆ ಹೇಳದೆ ನೀನು ರಮೆಯನ್ನು ವರಿಸಬೇಕೆಂದಲ್ಲ ನಾನು ಹೇಳುವುದು.

ರಮೇಶ :— ನಿಜ–ಆದರೆ,

ಕುಮುದ :—ಆದರೆಗೀದರೆ! ಏನೋ–ಬೆಣ್ಣೆ ಮುದ್ದೆ! ನಾನು ಗಂಡಸಾಗಿದ್ದಿದ್ದರೆ ಆ ಹುಡುಗಿಯ ಕಷ್ಟಗಳನ್ನಾದರೂ ನಿವಾರಿಸಲಿಕ್ಕೆ ಯಾವಾಗಲೋ ಮದುವೆ ಮಾಡಿಕೊಳ್ಳುತ್ತಿದ್ದೆ. ಅಣ್ಣಾ! ಇಲ್ಲಿ ನೋಡು! ಅಂಥ ಸುಶೀಲೆಯ ಗಂಡನಾಗುವ ಪುಣ್ಯಕ್ಕಾಗಿಯಾದರೂ ಧೈರ್ಯವನ್ನು ತಾಳಬಾರದೇ?

ಮೋಹನ:—ರಮೆಯಲ್ಲಿ ಎಂತಹ ಅನುರಾಗವಿದೆ ನಿಮಗೆ!

ಕುಮುದ :—ಅವಳ ಯೋಗ್ಯತೆಯೇ ಹಾಗಿದೆ. ಅನುಭವವಿದ್ದವರಿಗೆ ಗೊತ್ತದು. ಅನೇಕ ವಿಷಯಗಳಲ್ಲಿ ಅವಳ ಮತ್ತು ನನ್ನ ಮತಗಳಲ್ಲಿ ವ್ಯತ್ಯಾಸವಿದೆ. ಆದರೂ ನನಗವಳು ಪೂಜ್ಯಳೇ. ವರದಕ್ಷಿಣೆಯ ಬೆಂಕಿಗೆ ಬಿದ್ದ ಸ್ನೇಹಲತೆಯ ವಿಷಯ ಅವಳು ನಿನ್ನೆ 'ಸ್ನೇಹಲತೆಯು ಹುಚ್ಚಿ. ಬೆಂಕಿಯೊಳಗೆ ಬಿದ್ದು ಹಿಂದೂದೇಶದಲ್ಲೆಲ್ಲಾ ಒಂದೆರಡು ದಿನ ಗದ್ದಲವನ್ನೆಬ್ಬಿಸುವುದಕ್ಕಿಂತ ಸಾಯುವವರೆಗೆ ಮದುವೆಯನ್ನೇ ಮಾಡಿಕೊಳ್ಳದೆ, ಗಂಡಸರ ಕಿವಿ ಹಿಂಡಿದ್ದರೆ ಚೆನ್ನಾಗುತ್ತಿತ್ತು. ಆಗ ಬುದ್ಧಿ ಬರುತ್ತಿತ್ತು ಧರ್ಮವೆಂದು ದುಡ್ಡಿನ ಪೂಜೆಯಲ್ಲಿ ಬದುಕಿ ಸಾಯುವವರೆಗೆ'–ಎಂದು ಹೇಳಿದಳು.

ಮೋಹನ :—ನಿಜವೇ. ಹಾಗೆಯೇ ಆಗುತ್ತಿತ್ತು.

ರಮೇಶ :—ಸ್ನೇಹಲತೆ! ಓಹೋ–ನನ್ನ ಗುರುದೇವತೆಯೇ ಅವಳು. ಅವಳ 'ಫೋಟೋ'ವನ್ನು ದಿನಂಪ್ರತಿ ನೋಡುವುದರಿಂದಲೇ ನನ್ನ ಮನಸ್ಸು ಇಷ್ಟಾದರೂ ದೊಡ್ಡದಾಗಿದೆ.

ಕುಮುದ :—ಅಹಹ-ಎಂತಹ ದೊಡ್ಡ ಮನಸ್ಸು! ಆ ಫೋಟೋ ನೋಡಿ ಏನೋ ನಿನ್ನ ಮನಸ್ಸು ಅಷ್ಟು ಅರಳಿದ್ದು ಹೇಳು ನೋಡುವ? ನನಗೇನೋ ನೀನು (ಧಿಕ್ಕಾರವನ್ನು ಸೂಚಿಸಿ) .. ಇರಲಿ ಬಿಡು.

ಮೋಹನ :—ಅವಳ ಆತ್ಮಾಹುತಿಯ ವಿಷಯದಲ್ಲಿ ನಿಮ್ಮದೇನು ಮತ?

ಕುಮುದ :—ನನಗೇನೋ ಅದು ಅದ್ಭುತ ಸತ್ಕಾರ್ಯವೆಂದೇ ತೋರುತ್ತದೆ. ಎಂಥಾ ಪತ್ರ ಬರೆದಿಟ್ಟಳು! ನನಗೂ ಅಂಥ ಸಂದರ್ಭವೊದಗಿದರೆ ನಾನೂ ಪುಣ್ಯವಂತಳಾಗುತ್ತಿದ್ದೆನಲ್ಲಾ ಎಂದು ತೋರುತ್ತದೆ.

ರಮೇಶ :—ಹೋಗು ಸುಮ್ಮಸುಮ್ಮನೇ ಹಾಗೆ ಮಾತನಾಡಬೇಡ.

ಕುಮುದ :—ಹಾಗೋ-ಸರಿ-ವರ್ತಮಾನ ಪತ್ರದಲ್ಲಿ ಅವಳ ಸಂಕಟವನ್ನು ನೋಡಿ ನಿನಗೆ ರೋಮಾಂಚವಾಗುತ್ತದೊ!-**ಕಣ್ಣೆದಿರಿನಲ್ಲಿಯೇ** ನಡೆಯುವ ರಮೆಯ ಗೋಳು ನೋಡಿ ಹ್ಯಾಗೆ ಸುಮ್ಮನಿದ್ದೀ ಮತ್ತೆ! ಅಯ್ಯೋ-ನಿಮ್ಮ ಶಿಕ್ಷಣವೇ! ಕಣ್ಣಾರೆ ಕಂಡರೂ ಉಪೇಕ್ಷೆ. ಓದಿ ನೋಡಿದರೆ ಮಾತ್ರವೇನೋ ರಸಾವೇಗ! ಅಯ್ಯೋ ಛಾಪಖಾನೆಯ ಗುಲಾಮಗಿರಿಯೇ!

ಆದರೂ ಒಳ್ಳೇ ಅನುಕೂಲ! ಕೀರ್ತಿಯು ಬಂತು ಪರಮ ದಯಾಳು ಅಂತ! ಕೆಲಸ ಏನೂ ಮಾಡಬೇಕಾಗಿಲ್ಲ! ಏಕೆಂದರೆ ಹಾಳಾದ ಮೇಲೆಯೇ ಅಲ್ಲವೇ ನಿಮ್ಮಂಥವರ ಆಳವಾದ ಕಣ್ಣೀರ ಬಾವಿಗೆ ಬುಗ್ಗೆ ಹೊರಡುವುದು.

ಜವಾನ :—(ಓಡಿಬಂದು) ಚಿಕ್‌ದಣೀ—ದೊಡ್‌ದಣಿ, ದೊಡ್ಡದಣಿ ಹೊಂಟಾರೆ.

ಮೋಹನ :—ರಮೇಶ! ನಿನ್ನ ತಂಗಿಯ ಬುದ್ಧಿ ಧೈರ್ಯ ನೋಡು ಹೇಗಿದೆ. ನೀನೇಕೋ ಹೀಗಾದಿ!

ಕುಮುದಾದೇವಿ, ನಿಮ್ಮ ಮಾತುಗಳನ್ನೆಂದಿಗೂ ಮರೆಯಲಾರೆ. ಅರಳಿದ ಹೃದಯಕಮಲದ ಸುವಾಸನೆಯದು!

ಕುಮುದ :—ನಿಮ್ಮ ವಿಚಾರವನ್ನು ನಾನು ಹೇಗೆ ಮರೆಯಲಿ. ವಿಕಸಿತ ವಿವೇಕದ ಜ್ಯೋತಿಯದು ! ನಿಮ್ಮ ನಿಮ್ಮ ನಡುವೆ ನಾನು ಬಂದೆ. ಕ್ಷಮಿಸಬೇಕು. (ನಮಸ್ಕರಿಸಿ ಹೊರಡುವಳು.)

ಮೋಹನ:—(ಹೊರಟು ಹೋಗುವಾಗ) ಎಂತಹ ಕಾವ್ಯ-ಎಂತಹ ಶೀಲ!

[ರಮೇಶನು ಆತನನ್ನು ಹೊರಗೆ ಬಿಟ್ಟು ತಾನು ಮನೆಯ ಬಾಗಿಲನ್ನು ಪ್ರವೇಶಿಸಿ ಒಳಗೆ ಹೋಗುತ್ತಾನೆ.]

## ಅಂಕ ೨ ದೃಶ್ಯ ೧

[ಶಿವರಾಯರ ಮನೆ. ದಿವಾನಖಾನೆಯಲ್ಲಿ ಕೂತು ಅವರೂ ಆಚಾರ್ಯರೂ ಮಾತನಾಡುತ್ತಿದ್ದಾರೆ.]

ಶಿವ :—ಆಚಾರ್ಯರೇ, ಈ ಹೊತ್ತು ನನ್ನ ವ್ಯಾಖ್ಯಾನ ಹೇಗಿತ್ತು ? ಜನರೆಲ್ಲ ಸ್ತಂಭೀಭೂತರಾಗಿ ಹೋಗಿಬಿಟ್ಟರಲ್ಲವೆ ? ಸ್ನೇಹಲತೆಯ ಸುದ್ದಿಯನ್ನು ತೆಗೆದುಕೊಂಡ ಕೂಡಲೇ ಏನು ಚಪ್ಪಾಳೆಗಳು !! ಜನರ ಮನಸ್ಸಿಗೆ ಅಂಟಿ ಬಿಟ್ಟಿತಲ್ಲವೆ ಆ ವಿಷಯ ?

ಸುಬ್ಬ :—ಅದರ ಸಾರಾಂಶಕ್ಕಾಗಿ ಒಬ್ಬ 'ರಿಪೋರ್ಟರ್' ಈಗ ತಾನೆ ಬಂದಿದ್ದನು. ಸ್ವಲ್ಪ ತಡೆದು ಬಾ ಎಂದು ಹೇಳಿ ಕಳುಹಿಸಿದ್ದೇವೆ.

ಶಿವ :—ರಿಪೋರ್ಟರ್ !-ಏನು ವರ್ತಮಾನ ಪತ್ರದವನೋ (ಸ್ವ) ಸರ್ಕಾರಿ ರಿಪೋರ್ಟರ್ ಅಲ್ಲವಲ್ಲ ?

ಸುಬ್ಬ :—ನನ್ನ ಪರಿಚಯದವನೇ.

ಶಿವ :—(ಸ್ವ) ಇಷ್ಟು ಕಷ್ಟದಿಂದ ಗಳಿಸಿದ 'ರಾವ್ ಬಹಾದೂರಿ' ಹೋದರೆ (ಸುಬ್ಬಣ್ಣಾಚಾರ್ಯರಿಗೆ) ಹುಂ. ಯಾರು ಏನು ಬಂದರೂ ಪ್ರಾಮಾಣಿಕತನ ವಿರಬೇಕು. ಇದ್ದ ಮಾತು ಜಗಕ್ಕೆ ಸಾರಿ ಹೇಳಲೇಬೇಕು. ಅದೇ ಧರ್ಮ, ಯಾವ ದೇವರು ಬಂದರೇನು ಭೀತಿ ?

ಸುಬ್ಬ :—ನಾನು ಬಲ್ಲೆ ತಮ್ಮ ಸ್ವಭಾವ.

ಶಿವ :—ದೃಷ್ಟಾಂತಕ್ಕೆ ಈ ಹೊತ್ತೇ ನೋಡಿ. ಹಿಂಡಿನ ಹುಚ್ಚು ಬುದ್ಧಿಯಿಂದ ಜನರಿಗೆಷ್ಟು ಕಷ್ಟವಿದೆಯೆಂದು ತೋರಿಸಿಬಿಟ್ಟೆ. "ಸ್ನೇಹಲತೆಯ ನಿದರ್ಶನವು ಮೂರ್ಖರಿಗೆ ಒಂದು ದೀಪವೇ ಇದ್ದಂತಿದೆ. ಅಜ್ಞಾನ ಸಮುದ್ರದಲ್ಲಿ ಹಾದಿ ತಪ್ಪಿದ ಹಡಗಕ್ಕೆ ಸ್ನೇಹಲತೆಯ ಪ್ರಜ್ವಲಿತ ಚರಿತ್ರೆಯು ದೀಪಸ್ತಂಭದಂತೆಯೇ ಇದೆ" ಎಂದು ಹೇಳಿದೆನಷ್ಟೆ. ಎಂತಹ ಸ್ಫೂರ್ತಿದಾಯಕ ವಾಕ್ಯವದು ?

ಸುಬ್ಬ:—ಶಬ್ದ ಸರಣಿಯೋ ಅದು, ಹೂವಿನ ಹಾರವೋ-ಅದ್ಭುತವಾಗಿತ್ತು! ಬಹು ಚೆನ್ನಾಗಿತ್ತು !

ಶಿವ :—ನೀಲಕಂಠಶಾಸ್ತ್ರಿಗಳ ಮನುಷ್ಯನು ಈ ದಿನ ಬರುತ್ತಾನೋ ಏನೋ. ನೀವು ಸೊಂಟ ಕಟ್ಟಿಕೊಳ್ಳಬೇಕು. ನನಗೇನೋ ನನ್ನ ವ್ಯಾಖ್ಯಾನಕ್ಕೆ ಅನುರೂಪವಾಗಿಯೇ ನುಡಿಯಬೇಕಾಗಿರುವುದು. ಆದರೆ ನೀವು "ನಡೆಯ ಮಾತು ಬೇರೆ, ನುಡಿಯ ಮಾತು ಬೇರೆ" ಎಂದು ಯುಕ್ತಿಗಳನ್ನು ಹೇಳಿ ನನ್ನ ಬಾಯಿಯನ್ನೇ ಮುಚ್ಚಿಬಿಡಿ.

ಸುಬ್ಬ :— ಆ ಕೆಲಸ ನನ್ನದು. ನಿಮಗೇಕದರ ಚಿಂತೆ !

ಶಿವ :—ಸ್ವಲ್ಪ ಅವರೂ ಹಾದಿಗೆ ಬಂದಹಾಗೆ ತೋರುತ್ತದೆ. ಸ್ವಲ್ಪ ಬಿಗಿಯಾಗಿ ಹಿಡಿದರೆ ನಮ್ಮ ಮನಸ್ಸಿಗೆ ಸರಿಯಾಗಿ ಬರುತ್ತಾರೆ ! ನೋಡಿಕೊಳ್ಳಿ.

ಸುಬ್ಬ :—ಬಹಳ ಬಿಗಿದರೆ ಹಗ್ಗವೇ ಹರಿದೀತು.

ಶಿವ :—ಮಣ್ಣು ತುಂಬಿದೆ ನಿಮ್ಮ ತಲೆಯಲ್ಲಿ. ಹಾಗೇಕದು ? ಸರಿ, ಒಂದು ವೇಳೆ ಹುಡುಗಿ ಬೇರೆಯವನ ಪಾಲಿಗೆ ಬಿದ್ದಳೆಂದುಕೊಳ್ಳಿ. ನನಗೇನು ಕಡಿಮೆಯೋ ?

ಸುಬ್ಬ :—ಬಂದರವರು !

ಶಿವ :—ಆಚಾರ್ಯರೇ-ಅಂ-ಸ್ವಲ್ಪ-ಸರಿಯಾಗಿ.

[ನೀಲಕಂಠಶಾಸ್ತ್ರಿ ಮೋಹನರ ಪ್ರವೇಶ.]

ಓಹೋ ಬನ್ನಿ ಕೂತುಕೊಳ್ಳಿ (ಬೆಂಚು ತೋರಿಸಿ)

ಸುಬ್ಬ:—ಬನ್ನಿ ಡಾಕ್ಟರ್ ಸಾಹೇಬರೇ (ಸೋಫಾ ತೋರಿಸಿ)

ಶಿವ:—ಯಾರು ಡಾಕ್ಟರ್ ! -ಈಚೆಗೆ ಬನ್ನಿ.

ಮೋಹನ:— ಇಲ್ಲಿಯೇ ಮಾವನ ಮಗ್ಗುಲಲ್ಲಿ ಚೆನ್ನಾಗಿದೆ.

ಶಿವ:—ಎಂಥ ಶೀಲ ! ನಿಮ್ಮ ವಿದ್ಯೆಯ ಶೋಭೆಯಲ್ಲವೆ ಅದು ! ಈ ದಿನ ನನ್ನ ವ್ಯಾಖ್ಯಾನ ಕೇಳಿದಿರೋ ನೀವು ? ಹೇಗಿತ್ತು ?

ಮೋಹನ:—ಅದರಿಂದಲೇ ಇಲ್ಲಿ ಬರುವಷ್ಟು ಉತ್ತೇಜನವಾಯಿತು.

ಶಿವ:—ಅದೇನು ವಿಶೇಷ ?

ನೀಲ:--ಅದರಿಂದ ನಿಮ್ಮ ಮನಸ್ಸು ನಮಗೆ ತಿಳಿಯಿತು. ಇಷ್ಟರವರೆಗೆ ಏನೋ ಅಂದುಕೊಂಡಿದ್ದೆವು. ಕ್ಷಮಿಸಬೇಕು.

ಶಿವ:--ಹಾಗೆಯೇ ಜನರು ಮೋಸಹೋಗುತ್ತಾರೆ. ಕಸೋಟಿ * ಇಲ್ಲದೆ ಕನಕ ಪರೀಕ್ಷೆ !-ಮತ್ತು ಹಾಗೆಯೇ ಬೆಲೆ ಕಟ್ಟುವವರು ಎಷ್ಟೋ ಮಂದಿ ನಮ್ಮಲ್ಲಿ.

ಶಾಸ್ತ್ರಿಗಳ ಹುಡುಗಿಗೆ ೧೭ ನೇ ವರ್ಷವಿದ್ದೂ ಯಾಕೆ ಮಲಗಿದ್ದೀರಿ ! ಧನ್ಯರು ನೀವು. ನಿಮ್ಮ ಧೈರ್ಯವು ಬಹಳ ಆಶ್ಚರ್ಯಕರವಾಗಿದೆ.

ಮೋಹನ:--ನಿಮ್ಮ ಕುಮುದಾದೇವಿಯರ ವಯಸ್ಸೂ ಅಷ್ಟೇ ಇರಬಹುದಷ್ಟೆ ?

ಸುಬ್ಬ:--ಅವರಿಗೆ ಯಾರು ಹೆಸರಿಡುವವರು. ಅವರು ಪ್ರೌಢವಿವಾಹಾಭಿಮಾನಿಗಳು. ಆ ವಿಷಯ ಅವರ ವ್ಯಾಖ್ಯಾನಗಳು ಜೋರಾಗಿ

---

* ಒರೆಗಲ್ಲು

ನಡೆದಿವೆ. ಅವರ ಹುಡುಗಿ ! ಅವಳ ವಿದ್ಯೆ !! ಅವಳ ಕಾಲೇಜಿನ ಶಿಕ್ಷಣ !!!

ನೀಲ:--ನನ್ನ ಹುಡುಗಿಯನ್ನು ಕಾಲೇಜಿಗೆ ಕಳುಹಿಸುವುದು ಸಾಧ್ಯವಿಲ್ಲದಿದ್ದರೂ ಅವಳ ಕನ್ನಡ ಮತ್ತು ಸಂಸ್ಕೃತ ತಕ್ಕಮಟ್ಟಿಗೆ ಚೆನ್ನಾಗಿದೆ. ಇಂಗ್ಲೀಷು ಸಹ ತಕ್ಕಮಟ್ಟಿಗೆ ಬರುತ್ತದೆ.

ಸುಬ್ಬ:---(ನಿಂದನೆಯ ಭಾವದಿಂದ) ಅವಳು...ನಿಮ್ಮ ಹುಡುಗಿ, ಯೋಗ್ಯಳಾಗಿಯೇ...ಇರಬೇಕಲ್ಲವೆ ?

ಶಿವ:—ಹಾಗೇಕೆನ್ನುತ್ತೀರಿ ? ಕುಮುದೆಯೇನು, ಅವಳೇನು ?—ಅವರವರ ಯೋಗ್ಯತೆ ಅವರವರಲ್ಲಿ.

ನೀಲ:—ಎಷ್ಟೋ ಕಡೆ ನೋಡಿದೆ. ವರರಿಗೇನೋ ಕಡಿಮೆಯಿಲ್ಲ. ಆದರೆ ಪುಣ್ಯಾತ್ಮರಿಗೆ ಸಾಕಷ್ಟು ಧನವನ್ನು ಕೊಡುವ ಯೋಗ್ಯತೆಯು ಮಾತ್ರ ನನಗಿಲ್ಲ.

ಶಿವ:—ತಿಳಿಯಿತು. ತಿಳಿಯಿತು. ಆದರೆ...ನಿಮಗೆ ಸುಲಭವಾಗುವಂತೆ ಸದ್ಯಕ್ಕೆ ನನಗ್ಯಾವ ಜಾಗೆಯೂ ಕಾಣುವದಿಲ್ಲ.

ನೀಲ:—ಬೇರೆ ಜಾಗ ಏಕೆ? ತಮ್ಮಲ್ಲಿಯೇ ಇದೆ ಅದು.

ಶಿವ:—ಛೀ--ಛೀ--ಈ ವಯಸ್ಸಿನಲ್ಲಿಯೇ ರಮೇಶನ ವಿವಾಹಮಾಡುವುದು ಶೋಭಿಸುವುದಿಲ್ಲ.

ನೀಲ:—ಹಾಗಲ್ಲ-ಆದರೆ...

ಶಿವ:—ತಿಳಿಯಿತು. ಸರಿ ಸರಿ...ನಾನು ನನ್ನ ಒಂದು ಮಾತು ಖರ್ಚು ಮಾಡಿ ಒಬ್ಬ ಒಳ್ಳೆಯ ವರನನ್ನು ಏರ್ಪಡಿಸಬೇಕೆಂದಲ್ಲವೆ ನಿಮ್ಮ ಇಷ್ಟ? ಒಬ್ಬ ಒಳ್ಳೆಯ ಬಡವರ ಮನೆಯಲ್ಲಿ ನಾನು ಏರ್ಪಾಡು ಮಾಡುತ್ತೇನೆ. ಏನುಮಾಡಲಿ ? ನೀವು ಮೊದಲೇ ಹೇಳಲಿಲ್ಲ. ನಮ್ಮ ಪುರೋಹಿತರ ತಮ್ಮನೊಬ್ಬನಿದ್ದನು. ಒಳ್ಳೇ ಹುಡುಗ. ಆದರೇನು ? ಅವನ ಲಗ್ನವಾಗಿಹೋಯಿತು. ಇಲ್ಲವಾದರೆ.........

ನೀಲ:--ಹಾಗಲ್ಲ. ತಮ್ಮ ರಮೇಶರಾಯರು...

ಶಿವ:--ಹೌದು. ಹೌದು. ಅವಶ್ಯ.

ನೀಲ:--ನಿಜವೇನದು ? ನನ್ನ ಭಾಗ್ಯವಷ್ಟಿದೆಯೇನು ?

ಶಿವ:—ಅವಶ್ಯ. ಅವನಿಗೇ ಹೇಳುತ್ತೇನೆ. ಒಳ್ಳೇ ಹುಡುಗನವನು. ಆದರೆ ಬೊಂಬಾಯಿಯಲ್ಲಿ ಅವನ ಸ್ನೇಹದ ಹುಡುಗಿಯರಿರಬಹುದು. ಆದರೂ ನಿಮಗಾಗಿ ಸ್ವಲ್ಪ ಮನಸ್ಸು ಮಾಡುವಂತೆ ನಾನು ಹೇಳುತ್ತೇನೆ.

ನೀಲ:—ಅವರ ಲಗ್ನವೇನೋ ಆಗಬೇಕಷ್ಟೆ ?

ಶಿವ:—ಹೌದು, ಇತ್ತೀಚಿಗೆ ಅವನ ಎಗರುವ ಬುದ್ಧಿಯಿಂದ ಅವನಿಗೆ ಹೇಳುವುದೂ ಕಷ್ಟವೇ. ಎಷ್ಟೋ ಹುಡುಗಿಯರು ಬರುವರು ಅವನಿಗಾಗಿ. ವರದಕ್ಷಿಣೆ ಎಷ್ಟೋ ಕೊಡುವವರಿದ್ದಾರೆ. ಆದರೆ ಅವನೋ ಈ ಗೊಂದಲವನ್ನೆಲ್ಲಾ ಮನಸ್ಸಿಗೇ ಹಚ್ಚಿಕೊಳ್ಳುವುದಿಲ್ಲ. ಅವನಿಗೂ ನನ್ನ ಮತವೇ ಪ್ರಿಯ.

ಮೋಹನ :—(ಸ್ವ) 'ಡೊನೇಶನ್'' ಎಂದು ತೆಕ್ಕೊಳ್ಳುತ್ತಾನೋ ಏನೋ-- ಧರ್ಮಾತ್ಮ ನಪುಂಸಕ !

ನೀಲ :—ಅಂಥ ಸ್ಥಿತಿಯಲ್ಲಿ ನಮ್ಮ ಹುಡುಗಿ......

ಶಿವ :—ನನಗೆ ಸಮಯ ಬಹಳ ಕಡಿಮೆ...ಆದರೂ ನಿಮ್ಮಂಥವರಿಗಾಗಿ ಹ್ಯಾಗಾದರೂ ಬಿಡುವು ಮಾಡಿಕೊಂಡು ಒಳ್ಳೇ ಜಾಗೆ ಸಿಗುವಂತೆ ಮಾಡುತ್ತೇನೆ.

ಮೋಹನ :—(ಸ್ವ) ಇಲ್ಲಿಯೇನೋ...ಮಾವನ ಬೇಳೆ ಬೇಯುವ ಹಾಗೆ ಕಾಣುವುದಿಲ್ಲ. (ಶಿವರಾಯರಿಗೆ) ನಿಮ್ಮಲ್ಲನೇಕ ಮಂದಿ ಕನ್ಯೆಯ ಕಡೆಯವರು ಬರುವರು. ಆ ಪಟ್ಟಿಯಲ್ಲಿ ನಮ್ಮ ಮಾವನೂ ಸ್ವಲ್ಪ ಮರೆಯದೇ ಇದ್ದರೆ ಉಪಕಾರ.

[ಸುಬ್ಬಣ್ಣಾಚಾರ್ಯ ನಗುತ್ತಾನೆ.]

ಶಿವ: —ನಗುತ್ತೀರೇಕೆ ಸುಬ್ಬಣ್ಣಾಚಾರ್ಯರೇ? ಹುಚ್ಚೇನು ನಿಮಗೆ? ಪ್ರತಿಯೊಂದು ಬೆಳೆದ ಕನ್ಯೆಯ ತಂದೆಗೆ ಅನುಕೂಲತೆಗಳನ್ನು ಮಾಡಿ ಕೊಡುವುದು ಪುಣ್ಯಕಾರ್ಯವೇ. ಅದಕ್ಕೆ ನಗು?

[ವಿಷಯ ಪ್ರಾರಂಭಮಾಡಲಿಕ್ಕೆ ಸುಬ್ಬಣ್ಣಾಚಾರ್ಯರಿಗೆ ಕಣ್ಣುಸನ್ನೆ ಮಾಡುತ್ತಾನೆ]

ಸುಬ್ಬ:—ಅಲ್ಲಾ-ಎಲ್ಲಿ ನೀವು! ಎಲ್ಲಿ ಇವರು! ಇವರಿಗೂ ನಿಮಗೂ ಸಂಬಂಧವಾಗುವದೆಂದರೆ ಸಾಧ್ಯವೇನು?

ಶಿವ:—ಯಾಕಾಗಬಾರದು? ನಾನೇನು ದೊಡ್ಡ ಸಂಸ್ಥಾನಿಕನೋ?

ಸುಬ್ಬ:—ಆದರೂ ತಮ್ಮ ಯೋಗ್ಯತೆಗೆ ಸರಿಯಾದ ವರದಕ್ಷಿಣೆಯನ್ನು ಕೊಡುವುವಕ್ಕಾದೀತೇ ಇವರಿಗೆ?

ಶಿವ:—(ಬೇಸರವನ್ನು ನಟಿಸುತ್ತ) ಹರ-ಹರಾ! ಈ ವರದಕ್ಷಿಣೆಯ ಪೀಡೆ ಎಲ್ಲಿಂದ ಬಂತಪ್ಪಾ ನಮಗೆ (ಸಿಟ್ಟನ್ನು ತೋರಿಸಿ) ನಿಮ್ಮ ಬಾಯಿಗೆ...

ಸುಬ್ಬ:—(ಆಲೋಚಿಸುವವನಂತೆ) ಅಂ... ತಮ್ಮ ತಮ್ಮ ಮಾನ, ಪದವಿ ನೋಡಿಯೇ ನಡೆಯಬೇಕಷ್ಟೆ ಎಲ್ಲರೂ?

ಶಿವ:—ನನಗೇನೋ ನಿಮ್ಮ ಪ್ರಸ್ತಾಪದಿಂದ ಚಿಂತೆಯಿಲ್ಲ. ಆದರೂ ಈ ಕಾಲದ ಸುಶಿಕ್ಷಿತರಿಗೆ ಹಿರಿಯರು ಏರ್ಪಡಿಸಿದ ದಾಂಪತ್ಯ ಒಗ್ಗುವು ದಿಲ್ಲ. ನಾವೇ ಏನಾದರೂ ಮಾಡಿ ಕೊಟ್ಟರೆ ತಕ್ಕ ವೇಳೆಯಲ್ಲಿ ಮೋಸವಾದೀತು, ಆದುದರಿಂದ ರಮೇಶನನ್ನೂ ಕೇಳೋಣ ಒಂದು ಮಾತು.

ಮೋಹನ:—ಅವರನ್ನು ಈಗಲೇ ಕೇಳಿ ನೋಡಿಬಿಡಬಹುದಷ್ಟೇ?

ಶಿವ:—ಈಗಲೇ ಯಾಕೆ? ನಮ್ಮೆದುರಿಗೆ ಅವನಿಗೆ ಮಾತಾಡಲಿಕ್ಕೆ ಸಂಕೋಚವಾಗಬಹುದು.

ಮೋಹನ :—ಇಲ್ಲ, ಇಲ್ಲ. ಅವರನ್ನು ಈಗಲೇ ಕರೆದುಕೊಂಡು ಬರುತ್ತೇನೆ.

ಶಿವ :—ಬೇಡ, ಬೇಡ. ಅವಸರವೇಕೆ? ನಾನೀ ರಾತ್ರಿ ಅವನನ್ನು ಕೇಳುತ್ತೇನೆ. ನಾಳೆ ಬನ್ನಿ. ಮಾತಾಡೋಣ.

[ರಮೇಶನು ಬರುತ್ತಾನೆ.]

(ಸ್ವ) ಅದೋ-ಇವನೇ ಬಂದ! ಏನಾದರೂ ಪೀಕಲಾಟವಾಗುತ್ತದೀಗ.

ಮೋಹನ :—ಬಾ, ರಮೇಶ್, ಹೊತ್ತಿಗೆ ಸರಿಯಾಗಿ ಬಂದೆ ನೋಡು.

ಶಿವ :—ಬಾ, ಕೂತುಕೋ ಸಂಕೋಚವೇಕೆ? (ಮೋಹನನಿಗೆ) ಹದಿನಾರು ವರ್ಷದ ಮಗ ಮಿತ್ರನಿಗೆ ಸಮಾನನಂತೆ-ಬಾ. (ಮಗನಿಗೆ) ಈ ಕುರ್ಚಿಯ ಮೇಲೆ......

ಡಾಕ್ಟರ್ ಸಾಹೇಬರೇ ನಾಳೆ ಬರುತ್ತೀರಲ್ಲಾ ನಿಶ್ಚಯವಾಗಿ,

ಮೋಹನ :—ಇಲ್ಲ. ಈಗಲೇ ಎಲ್ಲ ನಿಕಾಲಿಯಾಗಲಿ ಅನ್ನುತ್ತೇನೆ.

ರಮೇಶ :—ಯಾತರ ನಿಕಾಲಿಯೋ?

ಮೋಹನ :—ಬೇರೇನು? ನಮ್ಮ ರಮೆಯು ನಿನ್ನ ಹೆಂಡತಿಯಾಗಬೇಕೆಂದು ಮಾವನ ಇಷ್ಟ.

ರಮೇಶ :—ಈಗ ಇದನ್ನು ಕೇಳಲಿಕ್ಕೆ ನನ್ನ ತಾಯಿ ಇದ್ದಿದ್ದರೆ ಅವಳಿಗೆ ಎಷ್ಟು ಸಂತೋಷವಾಗುತ್ತಿತ್ತು. ಚಿಕ್ಕಂದಿನಿಂದ ಆಕೆಯ ಮನಸ್ಸಿನಲ್ಲಿದ್ದ, ಆಕೆಯು ಹೇಳುತ್ತಿದ್ದ, ಮಾತಿದು. ಆಕ್ಷೇಪಣೆ ಏನು?

ಮೋಹನ :—ಶಾಬಾಷ್ ನಿನಗೇನೋ ಹುಡುಗಿಯು ಪಸಂದಾಗಿದ್ದಾಳಷ್ಟೆ.

ರಮೇಶ :—ಹೀಗೇನು ಮಾತಾಡುತ್ತೀ ಅಜ್ಞಾನದ ಮಾತುಗಳು.

ಸುಬ್ಬ :—ಅಜ್ಞಾನದ ಮಾತುಗಳೇ! ಭಳಿರೇ-ಅಲ್ಲದೇನು ಮತ್ತೆ? ಈ ದರಿದ್ರರ ಹುಡುಗಿ ನಮ್ಮ ರಾಯರಿಗೆ ಹೇಗೆ ಸರಿಹೋದಾಳು?

ರಮೇಶ:—ಅವಳನ್ನೇ ವರಿಸಬೇಕೆಂದು ನನ್ನಮ್ಮನ ಇಚ್ಛೆ ಇತ್ತು. ಅದೇ ನನ್ನ ಕಾಂಕ್ಷೇನೂ

ಶಿವ:—(ದುಃಖವನ್ನು ಸೂಚಿಸುತ್ತ) ಪಾಪ - ಹೋದಳು - ಆ ಪುಣ್ಯಾತ್ಮಳು. ಇದ್ದಿದ್ದರೆ......ಮಾತಾಡಿ ಏನು ಪ್ರಯೋಜನವೀಗ --ಅಂ--ಹೋದಳು. ಆಕೆಯ ಇಚ್ಛೆಗಳೆಲ್ಲವೂ ಆಕೆಯ ಹಿಂದೆಯೇ ಹೋದವು.

ರಮೇಶ:—ಅವಳ ಸ್ಮರಣೆ ಇದೆಯಷ್ಟೆ ಇನ್ನೂ ? ಹಾಗಿರುವಾಗ ಅವಳ ಇಚ್ಛೆಯನ್ನು ಹೇಗೆ ಮರೆಯಬೇಕು ? ಅಪ್ಪಾ ನೀನು ಬೇರೆಯಕಡೆ ನೋಡಿದರೂ ನಾನೇನೋ ಈ ಮಾತನ್ನು ನಿನಗೆ ಸ್ಪಷ್ಟವಾಗಿ ಹೇಳುವವನೇ ಇದ್ದೆ.

ಸುಬ್ಬ:—(ಸ್ವ) ಕಾಲೇಜಿನ ಹುಡುಗರು ಕೆಟ್ಟುಹೋಗುತ್ತಾರೆ ಎಂದು ನಾನು ಯಜಮಾನರಿಗೆ ಹೇಳುತ್ತಲೇ ಇದ್ದೆ......

ನೀಲ:—ರಮೇಶರಾಯರೇ ! ನಿಮ್ಮ ಮಾತೆಯ ಇಚ್ಛೆಯನ್ನು ಪೂರೈಸುವ ನಿಮ್ಮ ಸಂಕಲ್ಪವು ಮಾನಾರ್ಹವಾಗಿಯೇ ಇದೆ. ದುಃಖದಲ್ಲಿಯೇ ಮುಣುಗಿ ತೇಲುತ್ತಿರುವ ನನಗೆ ಅದೊಂದು ನಾವೆಯೇ ಆಯಿತು

ಶಿವ:—(ಸ್ವ) ಎಲಾ--ಎಲಾ, ಇವರಿಬ್ಬರೂ ಆಲಿಂಗನಕ್ಕೇ ಬಿದ್ದರಲ್ಲೋ! (ಶಾಸ್ತ್ರಿಗೆ) ಆಕೆಯ ಇಚ್ಛೆಯನ್ನು ಪೂರೈಸುವ ಸುಯೋಗವು ನನ್ನ ಮನಸ್ಸಿಗೂ ಬಂತು.

ಮೋಹನ:—(ಸ್ವ) ಇದರಲ್ಲೇನೋ ಇದೆ.

ನೀಲ—ನಿಜವಾಗಿಯೂ, ಈ ದಿನ ಧನ್ಯನಾದೆ.

ಸುಬ್ಬ:—ಧನ್ಯರಾದಿರೋ, ಬೇಷ್. ಧನವನ್ನೂ ನೋಡಬೇಕಾಗಿದೆ. ಧನಿಯನ್ನೂ ನೋಡಬೇಕು. ವರದಕ್ಷಿಣೆಯ ವಿಷಯ ಏನು ಹೇಳುತ್ತೀರಿ ?

ಶಿವ:— ಛೀ--ಛೀ, ಆಚಾರ್ಯರೇ, ಏನು ಮಾತಾಡುತ್ತೀರಿ. ವರದಕ್ಷಿಣೆಯು ಹಾಳು ಮಾತು ತೆಗೆಯಬೇಡಿ.

ಸುಬ್ಬ :—ಇದು ತೆಕ್ಕೊಳ್ಳುವದಿಲ್ಲವಾದರೆ ಇವರನ್ನು ಸೀಮೆಗೆ ಹೇಗೆ ಕಳಿಸುತ್ತೀರಿ ?

ಶಿವ:—ಹೌದು, ನಿಜ. ಅದೂ ಅಕೆಯ ಆಶೆಯಾಗಿತ್ತು. ಅದನ್ನೂ ಮದುವೆಯನ್ನೂ ಎರಡನ್ನೂ ಪೂರೈಸುವದೊಂದು ಭಾರ ನನ್ನಮೇಲೆಯೇ ಬಿದ್ದಿದೆ.

ಮೋಹ:—ನಿಮ್ಮ ಮಗನನ್ನು ಸೀಮೆಗೆ ಕಳುಹಿಸುವಷ್ಟು ದುಡ್ಡು ನಿಮ್ಮಲ್ಲಿಲ್ಲವೆಂದು ನನಗೇನೋ ತೋರುವುದಿಲ್ಲ.

ಶಿವ:—ಭ್ರಮೆಯದು--ಡಾಕ್ಟರರೇ--ಒಳಗೆ ಕೂಳು ಇಲ್ಲದೇಹೋದರೂ ಹೊರಗೆ ಮೀಸೆಗೆ ತುಪ್ಪ ಹಚ್ಚಿ ತಿರುಗುವ ಕಾಲವಿದು. ಎಲ್ಲಾ ಕಡೆಯಿಂದಲೂ ಸಂಪಾದನೆ ಕಡಿಮೆಯಾಯಿತು. ಮೇಲೆ-ಇದೊಂದು ರಾವ್ ಬಹದ್ದೂರಿ. ಇದನ್ನು ದಕ್ಕಿಸಲಿಕ್ಕೆ ಇಲ್ಲದ ಖರ್ಚು. ಸಂಪತ್ತಿ ಇದೆ ಅಂದರೆ ಏನಿದೆ? ದೊಡ್ಡ ಮನೆ ಟೊಳ್ಳು ಬಿದುರು, ಪೊಳ್ಳು ಜಂತೆ !

ರಮೇಶ :—ನನಗೇನೋ ಸೀಮೆಗೆ ಹೋಗಬೇಕೆಂದು ತೋರುವುದೇ ಇಲ್ಲ. ಹೋಗಿ ಬಂದವರು ಮಾಡಿದ ಉದ್ಧಾರವೇನೋ ? ಬರೇ ಬಟ್ಟೆ ಆಟ್ಟಹಾಸಗಳನ್ನೇ ನೋಡಬೇಕಾದ್ದು ಅವರಲ್ಲಿ.

ಶಿವ:—ಛೇ-ಛೇ, ಅದು ಹೇಗಾದೀತು? ಅದೂ ನಿಮ್ಮಮ್ಮನ ಇಷ್ಟೆ ತಾನೇ ಅದೂ ಆಗಿಯೇ ತೀರಬೇಕು.

ಮೋಹನ:—(ಸ್ವ) ಏನು ಮಾಡಬೇಕೀಗ ?

ಸುಬ್ಬ:—ಇಲ್ಲಿ ನೋಡಿ. ಆ ಹುಡುಗಿಯ ಮೈಮೇಲೆ ಎರಡು ಸಾಧಾರಣ ಒಡವೆಗಳನ್ನಾದರೂ ಹಾಕಬೇಕಷ್ಟೆ ?

ನೀಲ:—ನನ್ನ ಮಗಳಿಗೆ ಅದರ ಆಶೆಯೇ ಇಲ್ಲ. ಭಂಗಾರವೆಂದರೆ ತಿರಸ್ಕಾರವೇ ಅವಳಿಗೆ.

ಸುಬ್ಬ:—ಅದು ಬೇರೇ ಮಾತು. ನಿಮ್ಮ ಮಗಳಾಗಿರುವ ವರೆಗೆ ಹಾಗೆ. ಈ ರಾಯರ ಮನೆಯ ಸೊಸೆಯಾದಳೋ ಕಣ್ಣೇ ತಿರುಗುವುದು. ಗೊತ್ತೊ ?

ಶಿವ:—ಹಾಗಲ್ಲ, ನಮ್ಮ ಮರ್ಯಾದೆಗೆ ತಕ್ಕ ಒಡವೆಗಳನ್ನಾದರೂ ಹಾಕಬೇಕಾಗಿದೆಯಷ್ಟೆ ? ಆಕೆಯ ಒಡವೆಗಳೂ ಇವೆ. ಆದರೂ ಅದನ್ನು ಕುಮುದೆಗೆ ಕೊಡಬೇಕು. ಅದೂ ಆಕೆಯ ಇಷ್ಟವೆಯೇ !

ಮೋಹನ :—(ಸ್ವ) ಇನ್ನೇನು ಆಕೆಯ ಇಷ್ಟ ಹೊರಡುತ್ತದೋ! ದೇವರೇ ಬಲ್ಲ !

ಸುಬ್ಬ :—ಸರಿ ಲಗ್ನದ ಖರ್ಚಿಗೇನು ಮಾಡುತ್ತೀರಿ ?

ಶಿವ :ಆಚಾರ್ಯರೇ, ಏನು ? ಒಂದೊಂದೇ ಬೆಳೆಯುತ್ತಾ ಇದೆ. ಏನು ತಂಟೆಯೋ ಕಾಣೆ ಇರುವವನು ಒಬ್ಬನೇ ಹುಡುಗ. ಎಲ್ಲಾ ಕಡೆಯಿಂದಲೂ ವಿಚಾರಿಸಿ ಅವನ ಹಿತವನ್ನು ಅಲ್ಲವೇ ಮಾಡಬೇಕಾದ್ದು ನಾವು. ಹೀಗೆ ಬೆಳೆಸುತ್ತ ಹೋದರೆ ?

ರಮೇಶ:—ನನ್ನ ಲಗ್ನವನ್ನು ಶಾಸ್ತ್ರವಿಧಿಗೆ ಸರಿಯಾಗಿ ಸ್ವಲ್ಪದರಲ್ಲಿಯೇ ಮಾಡಬೇಕು. ಅಲ್ಲಿಂದ ಮುಂದಕ್ಕ ಇಲ್ಲದ ಗೊಂದಲಕ್ಕೆ ಸೊಪ್ಪು ಹಾಕುವ ಇಷ್ಟವೆಯೇ ನನಗಿಲ್ಲ.

ಶಿವ :—ನೀನೇನೋ ಹಾಗೆನ್ನಬಹುದು. ಜನರೇನೆಂದಾರು ? ನಿನಗೇನು ಗೊತ್ತು ಈ ವಿಷಯವೆಲ್ಲಾ ? ನನಗೆ ಹಿಂಡಿನ ಲೆಕ್ಕವಿಲ್ಲ, ಆದರೂ ನಾವು ಮಾಡಬೇಕಾದ್ದನ್ನು ಮಾಡಲೇಬೇಕು. ತನ್ನ ಹುಡುಗನನ್ನು ಶಾಸ್ತ್ರವೆಂದಿಟ್ಟುಕೊಂಡು ಸುದ್ದಿಯಿಲ್ಲದೆ 'ಗಪ್‌ಚುಪ್ ನಿಕಾಃ' ಮಾಡಬೇಕೆಂದು ಆಕೆಯ ಇಚ್ಛೆಯಿತ್ತೇನು ? ಇದ್ದಿತೇನು ಎಲ್ಲಿಯಾದರೂ ? ಅವಳ ಇಚ್ಛೆಗೆ ಸರಿಯಾಗದ ಗೂಗೆಯ ಲಗ್ನಮಾಡಿ

ಏನು ಸಾರ್ಥಕ? ಆಕೆಯ ಇಚ್ಛೆಯನ್ನು ಪೂರೈಸಲೇಬೇಕು ನಮ್ಮ ಹಿರಿಯರು ಮೇಲಿನ ಲೋಕದಿಂದ ನೋಡದಿರುವರೋ ಇದನ್ನೆಲ್ಲಾ? ಅದೂ ಹಾಗಿರಲಿ. ಅವಳ ಸ್ವರ್ಗಸ್ಥ ಆತ್ಮಕ್ಕೆ ತೃಪ್ತಿಯಾಗಬೇಡವೋ?

ಸುಬ್ಬ :—ಇವರ ಹಿತಕ್ಕಾಗಿ ಎಷ್ಟು ಮುಡುಪುಗಳಿವೆ ಗೊತ್ತಿದೆಯೊ ಸ್ವಾಮಿ? ಇವರ ಮಾತೋಶ್ರೀಯವರು, 'ನನ್ನ ಮಗ ಸುಖವಾಗಿರಲಿ, ವಿದ್ಯಾಭ್ಯಾಸಕ್ಕೆ ಪರ ಊರಿಗೆ ಹೋದರೆ ಚೆನ್ನಾಗಿರಲಿ! ಮನೆಗೆ ಬಂದು ಆತನ ಲಗ್ನವಾಗುವ ಕಾಲಕ್ಕೆ ಮಹಾರುದ್ರ, ಶತ ಚಂಡಿ, ಗಣ ಹೋಮ, ಮಹಾಭಿಷೇಕ, ತುಲಾಭಾರ ಮುಂತಾದ್ದನ್ನು ಮಾಡಿಸುತ್ತೇನೆ' ಎಂದು ಎಷ್ಟೋ ಹರಿಕೆಗಳನ್ನು ಮಾಡಿದ್ದರು. ಅವನ್ನು ತೀರಿಸಲಿಕ್ಕೇ ಬೇಕು—೩೦೦೦.

ಮೋಹನ :—ಆಚಾರ್ಯರೇ, ಸ್ವಲ್ಪ ಇಲ್ಲಿ ಬನ್ನಿ (ಒಂದು ಕಡೆಗೆ ಹೋಗಿ) ನೀವು ಹೇಳಿದ್ದೆಲ್ಲಾ ಸರಿಯಾಗಿಯೇ ಇರಬಹುದು. ಆದರೆ ಇನ್ನೂ ಆ-'ಮುಂತಾದ್ದು' ಒಂದು ಇದೆಯಲ್ಲವೆ? ಅದಕ್ಕಾಗಿ, ಲೆಕ್ಕ ಸ್ವಲ್ಪವಾದರೂ ಬೇಕಾದೀತು. ಆದ್ದರಿಂದ 'ಆ ಮುಂತಾದ್ದರ' ಲೆಕ್ಕವನ್ನು ಸ್ವಲ್ಪ ಮೊದಲೇ ಕೂಡಿಸಿಬಿಡಿ.

ಸುಬ್ಬ:—ಅದೇನದು?

ಮೋಹನ :—ನಿಮಗೆಲ್ಲ ಗೊತ್ತು ಎಂದು ನಾನೂ ಕೇಳುತ್ತೇನೆ. ಹೇಳಿ, ರಮೇಶನ ತಾಯಿ ಅವನನ್ನು ಹಡೆದಳು. ಅವನನ್ನು ೯ ತಿಂಗಳು ಹೊತ್ತ ಕೂಲಿ ಬೇಕು. ಆವಾಗಿನ ತೊಂದರೆ ಮತ್ತು ಅದರ ಖರ್ಚು, ಮತ್ತು ತೊಂದರೆಯ ಖರ್ಚೂ ಇರಬಹುದು. ಇಲ್ಲಿಯ ವರೆಗೆ ಬೆಳೆಸಿದರು ಅವನನ್ನು. ಅವನು ಖಾಯಿಲೆಯಾಗಿ ಬಿದ್ದಿರಬಹುದು, ಅದರ ಖರ್ಚು. ಅವನು ಆಟಗೀಟ ಆಡುವಾಗ ಉಂಗುರ ಬಳೆ ಏನಾದರೂ ಕಳೆದುಕೊಂಡಿರಬಹುದು, ಅದರ ಖರ್ಚೂ ಇದೆ. ಒಬ್ಬನೇ ಹುಡುಗನಾದುದರಿಂದ ಆಗಾಗ್ಯೆ ಜಾತಕವನ್ನು ತೋರಿಸಿರಬೇಕು. "ನಮ್ಮ ಹುಡುಗನು ಮುಂದಕ್ಕೆ ಬರುತ್ತಾನೋ ಇಲ್ಲವೋ? ಅವನ

ನಕ್ಷತ್ರ ಹೇಗಿದೆ, ಆ ಯೋಗ ಹೇಗಿದೆ ಈ ಯೋಗ ಹೇಗಿದೆ, ವಿದ್ಯೆ ಹೇಗಿದೆ, ”– ಎಂದು ಏನೇನೋ ಕೇಳುವುದಕ್ಕಾಗಿ ಜೋಯಿಸರಿಗೆ ದುಡ್ಡು ಕೊಟ್ಟಿರಬೇಕು. ಇನ್ನೂ ಏನೇನೋ......ಆ ಒಬ್ಬ ಮಗನಿಗಾಗಿ, ಖರ್ಚಿಟ್ಟಿರಬಹುದು. ಅದನ್ನೆಲ್ಲಾ ಜಮಾಯಿಸಿ ಆ ಮುಂತಾದ್ದರ ಲೆಕ್ಕವನ್ನೂ ಹೇಳಿಬಿಡಿ, ಒಂದೇ ಸಲ.

ಸುಬ್ಬ :—ಸಗಣಿ ತುಂಬಿದೆ ಈ ತಲೆಯಲ್ಲಿ.

ಶಿವ :—ಆಚಾರ್ಯರೇ ಏನಿದು ! ಸಭ್ಯರಾಗಿ ಮಾತಾಡಬೇಕು—ಏನು ಭಾಷೆಯಿದು ? ಅದೇನದು ?

ಸುಬ್ಬ :—ವರದಕ್ಷಿಣೆಗೆ ಎಲ್ಲ ಖರ್ಚೂ ಕೂಡಿಸಿ ಹೇಳಿ ಎಂದರು ಇವರು. ನೀಲಕಂಠಶಾಸ್ತ್ರಿಗಳಂಥ ಲಕ್ಷ್ಮೀಪುತ್ರರ ಕಡೆಯಿಂದ ಹಾಗೆ ತಕ್ಕೊಳ್ಳಲಿಕ್ಕೆ ಏನೋ ಅಲ್ಲವೆ ರಾಯರು ಹುಟ್ಟಿದ್ದು !

ಶಿವ :—(ಒತ್ತಿ) ವರದಕ್ಷಿಣೆಯನ್ನು ನಾನು ತೆಗೆದು ಕೊಳ್ಳುವುದೇ ಇಲ್ಲವೆಂದು ಹೇಳಲಿಲ್ಲವೇ ? ಮತ್ತೂ ಮತ್ತೂ ಅದೇಮಾತು. ಕೆಲವು ಏರ್ಪಾಡುಗಳ ವಿಷಯ ಮಾತ್ರ ನಾನು ಚರ್ಚಿಸುತ್ತಿದ್ದೇನೆ, ಅವರು ಏನಾದರೂ ಅಂದುಕೊಳ್ಳಲಿ ನನ್ನ ಮನಸ್ಸು ಸ್ವಚ್ಛ ಕನ್ನಡಿಯಂತಿದೆ.

ಮೋಹನ :—ಸರಿ. ಮೇಲಿನ ಖರ್ಚು ಎಂದು ಏನು ಚಾರ್ಜ್ ಮಾಡಬೇಕೆಂದಿದ್ದೀರಿ ?

ಸುಬ್ಬ :—ಶಾಸ್ತ್ರಿಗಳು ಅಷ್ಟು ಶ್ರೀಮಂತರಾಗಿ ಎಷ್ಟು ಕಾಲವಾಯಿತು ?

ಮೋಹನ :—ಅವರೇನೋ ದಿವಾಳಿಯೇ. ಆದರೆ ನನಗೆ ವೈಭವಬಂದಿದೆ. ನನ್ನೊಬ್ಬ ಮಾವನು—ಮಕ್ಕಳಿಲ್ಲದ ಮಾವನು—ತೀರಿಹೋದನು. 'ವಿಲ್' ನಲ್ಲಿ ತನ್ನ ಆಸ್ತಿಯನ್ನು ನನ್ನ ಹೆಸರಿನಲ್ಲಿ ಮಾಡಿಬಿಟ್ಟು ಹೋಗಿದ್ದಾನೆ: ೧॥ ಲಕ್ಷ.

ಶಿವ:—ಬನ್ನಿ. ಕುರ್ಚಿಯ ಮೇಲೆ ಕೂತುಕೊಳ್ಳಿ. ಭಾಗ್ಯವಂತರು ನೀವು. ಎಷ್ಟುಹೊತ್ತು ನಿಲ್ಲುವಿರಿ? ಕೂತುಕೊಳ್ಳಿ ಅಂದರೆ.

ನೀಲ:—(ಒಂದು ಕಡೆ) ಮೋಹನಾ ನಿನಗೇನಾಗಿದೆ? ಸುಮ್ಮನೇ ಏನೇನೋ ಹೇಳುತ್ತಾ ಇದ್ದೀಯಲ್ಲಾ?

ಮೋಹನ:—ರಮೆಗಾಗಿ ಐದುಸಾವಿರ ಖರ್ಚುಮಾಡುವದೆಂದರೆ ಏನೊಂದು ದೊಡ್ಡದು? ನನ್ನ ಕೈಯ್ಯಲ್ಲಿದ್ದ ಕೆಲಸ!

ಶಿವ:—ಇನ್ನೊಂದು ಯೋಚನೆ ಹೊಳೆಯುತ್ತಿದೆ. ನಮ್ಮ ಹುಡುಗಿಯೂ ಲಗ್ನಕ್ಕೆ ಸರಿಯಾಗಿ ಬೆಳೆದಿದ್ದಾಳೆ.

ಮೋಹನ:—(ಸ್ವ) ಭಳಿರೇ! ನನ್ನ ಶ್ರೀಮಂತಿಕೆಯ ಪ್ರಭಾವವಿದು!

ಶಿವ:—ಆವಾಗ ರಮೇಶನ ಲಗ್ನದ ಸರಿ ನಿಮ್ಮ ಲಗ್ನವೂ ಆಗಿಬಿಟ್ಟರೆ ಚೆನ್ನಾಗಿರುತ್ತದಲ್ಲವೆ? ಖರ್ಚು ಕಡಿಮೆ, ಸೌಕರ್ಯ ಹೆಚ್ಚು ನೋಡಿ. ಏನನ್ನುತ್ತೀರಿ?

ಮೋಹನ:—(ಸ್ವ) ನಿಮ್ಮ ಹುಡುಗಿಯ ಲಗ್ನಕ್ಕೆ ಮಾತ್ರ ಖರ್ಚು ಕಡಿಮೆಯಾಗಬೇಕೋ?

ರಮೇಶ:—ಕುಮುದೆಗೆ ವಿವಾಹದ ಇಚ್ಛೆಯೇ ಇಲ್ಲವಂತಲ್ಲಾ?

ಶಿವ:—ಇಲ್ಲಿ ನೋಡಿ ಡಾಕ್ಟರರೇ--ಹುಡುಗಿ ಅವಳು. ನಿಮಗೂ ಅವಳಿಗೂ ಸ್ವಲ್ಪ ಪರಿಚಯವಾಗಬೇಕು--ಅಷ್ಟೇ. ಬರುವ ವರ್ಷ ಬಿ.ಎ. ಪ್ಯಾಸಾಗುತ್ತಾಳೆ. ನಿಮ್ಮನ್ನು ಕಂಡು, ನಿಮ್ಮ ಆ--ಆ--ಆಕಸ್ಮಿಕ ಧನಲಾಭದ ವಾರ್ತೆಯನ್ನೂ ಮೇಲೆ ಕೇಳಿದರೆ, ಮತ್ತೆ ನಿಮ್ಮ ಧ್ಯಾನವನ್ನು ಬಿಡುವುದೇಇಲ್ಲ. ಅವಳೂ ಒಳ್ಳೇ ಹುಡುಗಿ. ನಾನು ಅಂಥಾ ತರಬೇತು ಕೊಟ್ಟಿದ್ದೇನವಳಿಗೆ. ಈ ಮದುವೆಯ ವಿಷಯದಲ್ಲಿ ನಾನು ಉದಾರಮತವಾದಿ. ಅದಕ್ಕೇ ನಾನೂ ನಿಮ್ಮ ಹುಡುಗಿಯೊಡನೆ ಲಗ್ನಮಾಡಿಕೊಳ್ಳಲಿಕ್ಕೆ ರಮೇಶನಿಗೂ ಆಕ್ಷೇ

ಷಣೆ ತೆಗೆಯಲಿಲ್ಲ. ಇಲ್ಲವಾದರೆ ನನ್ನ ಮನಸ್ಸಿನಲ್ಲಿದ್ದಂತೆಯೇ ವ್ಯವಸ್ಥೆ ಮಾಡುತ್ತಿದ್ದೆ. ನೀವಿಬ್ಬರೂ ಸ್ವಲ್ಪ ಪರಿಚಯ ಮಾಡಿಕೊಳ್ಳಬೇಕು.

ಮೋಹನ:—ನಿಮ್ಮ ಸ್ವಭಾವ ಬಹಳ ವಿಚಿತ್ರವಾಗಿದೆ. (ಸ್ವ) ಆದರೆ ವರದಕ್ಷಿಣೆ ವಿಷಯ ಮಾತ್ರ.

ಶಿವ:—ನನ್ನ ಹುಡುಗಿಯನ್ನು ನೀವು ನೋಡಿಯೇ ಇದ್ದೀರಿ. ಮುಗಿಯಿತು. ಮುಂದಿನದೆಲ್ಲಾ ಸುಬ್ಬಣ್ಣಾಚಾರ್ಯರು ಮಾತಾಡುವರು.

ಸುಬ್ಬ:—ಅದು ನನ್ನ ಕೆಲಸ. ನಡೆಯಿರಿ ಡಾಕ್ಟರರೇ, ನಿಮ್ಮ ಕಡೆಗೆ ಹೋಗೋಣ ಬನ್ನಿ.

ನೀಲ:—ಈ ಸಂಬಂಧ ಕೈಗೂಡುವುದೆಂದು ನಾನು ತಿಳಿದಿದ್ದಿಲ್ಲ. ಆದರೆ ದೈವಕೃಪೆಯಿಂದ -- ದೈವಕೃಪೆಯೇನು--ತಮ್ಮ ಕಟಾಕ್ಷದಿಂದಲೇ ನನ್ನಂಥ ಬಡವನಿಗೆ ನಿಮ್ಮಂಥ ಭಾಗ್ಯಶಾಲಿಗಳ ಸಾನ್ನಿಧ್ಯವು ಲಭಿಸಿತು. ಬರುತ್ತೇನೆ. ನಮಸ್ಕಾರ.

ಶಿವ:—ಶಾಸ್ತ್ರಿಗಳೇ! ಹೋಗುವಾಗ ಸಕ್ಕರೆ ಹಂಚುವ ನಿಶ್ಚಯದಿಂದಲೇ ಹೋಗಿ. (ಮೋಹನನು ಶಿವರಾಯನಿಗೆ ಸಾಷ್ಟಾಂಗ ಮಾಡುತ್ತಾನೆ) ಇದೇನು ನಮಸ್ಕಾರ! ಇದಕ್ಕಲ್ಲವೇ ಸೌಜನ್ಯವೆನ್ನುವುದು. ಡಾಕ್ಟರರೇ! ಪದೇಪದೇ ಬಂದು ಹೋಗುತ್ತಿದ್ದರೇನೇ ಪರಿಚಯವು ಹೆಚ್ಚಾಗುವುದು. ನನ್ನ ಹುಡುಗಿಯ ಪರಿಚಯವೂ ಆಗಬೇಕು. ಆಗ ಆ ಮಗು ನಿಮ್ಮ ಗುಣವನ್ನು ಕಂಡು ಮೋಹಿತಳಾಗದಿರುವಳೇ? ಎಷ್ಟೆಂದರೂ 'ನೇಚರ್ ಇಸ್ ನೇಚರ್' *

[ಶಾಸ್ತ್ರಿ, ಮೋಹನ, ಸುಬ್ಬಣ್ಣಾಚಾರ್ಯರು ಹೊರಗೆಹೋಗುತ್ತಾರೆ. ಶಿವರಾಯನು ಒಳಗೆ ಹೋಗುತ್ತಾನೆ.]

---

* Nature is nature

ರಮೇಶ :—ಅಮ್ಮಾ ! ಲಕ್ಷ್ಮೀ – ನಿನಗೆ ಅನಂತ ನಮಸ್ಕಾರಗಳು. ದೂರ ದಿಂದಲೇ ವಂದನೆಗಳು. ಶ್ರೀಮಂತರ ವೇಷಕ್ಕೇ ಇಷ್ಟು ಮರ್ಯಾದೆ ಇದೆಯಲ್ಲವೇ! ನನ್ನಪ್ಪನ ಕಣ್ಣಿನಲ್ಲಿ ಈ ಶಃಸ್ತ್ರಗಳೆಲ್ಲಿ ! ಆದರೆ ಅವರ ಮೇಲಿರುವ ನಿನ್ನ ಕಟಾಕ್ಷವನ್ನು ನೋಡಿದರೆ !--ರಾಜರು ನಿನ್ನ ದಾಸರು. ರಾಜ್ಯಾಂಗದವರು ನಿನ್ನ ದಾಸರು ! ಆಹಾ ಬಹುಮತ ರಾಜ್ಯದಲ್ಲಿ ‡ 1 ಸಹ ಮತವನ್ನು * 2 ಮಾರಾಟಕ್ಕೆ ನೀನು ಕೊಂಡುಕೊಳ್ಳಬಲ್ಲೆ ನಿನ್ನ ದಾಕ್ಷಿಣ್ಯ ದಬ್ಬಾಳಿಕೆಗಳಿಂದ ತಕ್ಕೊಳ್ಳ ಬಲ್ಲೆ. ಧನಾಭಿಲಾಷೆಯು ಹುಟ್ಟಿದಕೂಡಲೆ ರಾವ್‌ಬಹದೂರರ ಗರ್ವಕ್ಕೂ ರಾಹು ಬಡಿಯಿತೇ ! ನಿನ್ನ ರಾಜ್ಯದಲ್ಲಿ ಗುಣ, ವಿದ್ಯೆ ನಿಸ್ಸ್ವಾರ್ಥ ಸೌಜನ್ಯಗಳಿಗೆ ಎಡೆಯೇ ಇಲ್ಲವೋ ? ಬಡವರನ್ನು ಕೇಳುವವರೇ ಇಲ್ಲ. ನಿನ್ನಾಶೀರ್ವಾದವನ್ನು ಪಡೆದವರಿಗೇ ಮಾನ! ಇಲ್ಲಿಯು ದುಃಖವು ನಿನ್ನ ಉಸಿರು. ಹಿಂಸಾತ್ಮಕರಿಗೆ ನೀನೇ ಗುರು. ಮೇಲೆ ಧನಲಕ್ಷ್ಮಿಯೆಂದಲ್ಲವೆ ನಿನ್ನ ಹೆಸರು ! ಕ್ಷಣಭಂಗುರವಾದ ವಸ್ತುಗಳನ್ನು ಮೆರೆಯಿಸಿ ಕೀರ್ತಿಯ ಡಂಗುರವನ್ನು ಹೊಡೆಯುತ್ತ ತಿರುಗುವವರು ಮೂರ್ಖರಲ್ಲದೆ ಇನ್ನೇನು ? ಅಜ್ಞಾನಿಗಳ ಕಣ್ಣೆದಿರಿ ನಲ್ಲಿ ಜಗವು ಹೇಗಿದೆ ಎಂದದರ ಸ್ವಾರ್ಥಮಯ ನೈಜವನ್ನು ಮೆರೆ ಯಿಸುವವಳೂ ನೀನೇ. ಅಮ್ಮಾ ನಮಸ್ಕಾರಗಳು. ಸಾಷ್ಟಾಂಗ ನಮಸ್ಕಾರಗಳು !

[ಪರದೆಯು ಬೀಳುತ್ತದೆ]

## ಅಂಕ ೨. ದೃಶ್ಯ ೨.

[ಬೀದಿ. ಕುಮುದ ಮೋಹನರ ಪ್ರವೇಶ]

ಮೋಹನ :—ನೀವು ಕೇಳಿದ್ದು ಒಂದು ತತ್ತ್ವ ಸಮಸ್ಯೆ. ಅದನ್ನು ಬಿಡಿ ಸಲಿಕ್ಕೆ ಮನಸ್ಸಿಗೆ ಶಾಂತಿಬೇಕು. ರಮೆಯ ತಲೆಯ ಮೇಲೆ ಅಕ್ಷ ತೆಯು ಬೀಳುವ ತನಕ ನೀವು ಕೇಳಿದಂಥ ಎಲ್ಲ ದೊಡ್ಡ ಪ್ರಶ್ನೆ ಗಳಿಗೂ ರಜಾ.

---

‡ 1 democracy * 2 Votes

ಕುಮುದ:—ನಿಜವೇ. ರಮೆಯ ಲಗ್ನವೇ ತತ್ಕಾಲಕ್ಕೊಂದು ದೊಡ್ಡ ವಿಷಯ. ಇರಲಿ ಬಿಡಿ, ನನ್ನ ಪ್ರಶ್ನೆಯದೊಂದೇನು, ಆದರೆ ರಮೇಶನ ಧೈರ್ಯ ಹೇಗಿದೆಯೊ? ಪಾಪಭೀರು ಆತನು.

ಮೋಹನ:—ವಿವೇಕವಿಲ್ಲದವರಿಗೆ ಅದೂ ಒಳ್ಳೇದೇ. ಆದರೆ ಯುಕ್ತಾಯುಕ್ತವನ್ನು ತಿಳಿದು ಸಂಘವನ್ನೂ ತಮ್ಮನ್ನೂ ಉದ್ಧರಿಸಿಕೊಳ್ಳಲಿಚ್ಛಿಸುವವರಿಗೆ ಮಾತ್ರ ಆ ಭೀರುತ್ವವು ದೊಡ್ಡ ವೈರಿಯೇ ಸರಿ. ಹೀಗೆ ಮಾಡುವುದರಲ್ಲಿ ಹಿತವಿದೆ, ಹಾಗೆ ಹೋದರೆ ಅಹಿತ – ಎಂದು ತಿಳಿದರೂ ರೂಢಿಗೇ ಮತ್ತೂ ಮತ್ತೂ ಸಾಷ್ಟಾಂಗ ಹಾಕಿದರೆ ಅವರಿಗೇನೆನ್ನಬೇಕು?

ಕುಮುದ:—ಎರಡು ಕಾಲುಗಳ ಪಶುಗಳೆನ್ನಬೇಕು. ಇರುವುದು ಮನುಷ್ಯನ ಬುದ್ಧಿ, ನಡೆಯುವುದು ಪಶುವಿನ ಹಾದಿ – ಅಂದಮೇಲೆ ಹಾಗಲ್ಲದಿನ್ನೇನು ಮಾಡಬೇಕು?

ಮೋಹನ:—ನೀವಿದ್ದಾಗ ನನಗೇನೂ ಭಯವಿಲ್ಲ. ರಮೇಶನನ್ನೂ ಬುದ್ಧಿಗೆ ಸರಿಯಾದ ಹಾದಿಯಲ್ಲಿ ನಡೆಸಲಿಕ್ಕೆ ಸಾಕು ನಿಮ್ಮ ಮಾತಿನ ಚಾಬೂಕು.

ಕುಮುದ:—ನನ್ನ ಶಕ್ತಿಗಳೆಲ್ಲವೂ ನಿಮ್ಮವೇ ಆಗಿವೆ. ಹಿತವನ್ನು ಕಂಡೂ ಹತಾಶಳಾಗಿ ಕೂತರೆ ಹೆಣ್ಣು ಜಾತಿಗೇ ನಾನು ಅವಮಾನಮಾಡಿದಂತಾಗುವದಿಲ್ಲವೇ. ಆರ್ಯಮಂತ್ರಗಳಲ್ಲಿರುವ ‘ಅಭೀಃ’ ಎಂಬುದೇ ನನ್ನ ಜಪಮಂತ್ರ. ಇದೊಂದಿಲ್ಲದೇ ಹೋದಲ್ಲಿ ಸುಧಾರಕರ ಮಾತೆಲ್ಲ ಬರಿಯ ಗದ್ದಲವೇ.

ಮೋಹನ:—ನಾವು ಈಗ ಮಾಡಲಿಕ್ಕಿರುವ ಕಾರ್ಯವು ಸ್ವಲ್ಪ ರೂಢಿಬಾಹ್ಯವಾಗಿ ಅನಾಚಾರವೆಂದು......

ಕುಮುದ:—(ಅವಸರದಿಂದ) ಅನಾಚಾರವೆಂದು ಕಂಡುಬಂದರೂ ಏನಾಯಿತು? ಪಾಪವೆಂದು ಕಂಡುಬಂದರೂ ಏನಾಯಿತು? ಪಾಪವೊ

ಪುಣ್ಯವೊ ? ಅದನ್ನು ವಿವೇಚಿಸುವವರೆಷ್ಟುಮಂದಿ ಸನಾತನ ಧರ್ಮ ಎಂದು ಎಗರುವವರಲ್ಲಿ? ಅವರಿಗಿಷ್ಟೇ - ಹತ್ತುಮಂದಿ ಮಾಡಿದ್ದೇ ಪುಣ್ಯ, ಆ ಹತ್ತು ಮಂದಿಯು **ಮುಂದೆ** ತಮ್ಮಿಂದ ಮಾಡಲಿಕ್ಕಾಗದ್ದೆಲ್ಲವೂ ಪಾಪ; ಇದೇ ಅವರ ಜಾತಿಯ ರೀತಿ. ಅವರ ಆಚಾರದಿಂದ ವಿಚಾರವೇ ಹಾರಿಹೋಗಿದೆ,

ಮೋಹನ:—ವಿಚಾರದೊಡನೆ ದಯಾ ಗುಣವೂ ಹೋಗಿದೆ. ಈಗಿರುವುದು ಸ್ವಾರ್ಥವೇ,-ಕಾಮವೇ ಪ್ರೇಮವೆಂದರೆ.

ಕುಮುದ :—ಸತ್ಯವಾದ ಮಾತನೆಂದಿರಿ, ಈಗ ನೋಡಿ--ನಮ್ಮಣ್ಣನೇ ರಮೆಯಲ್ಲಿ ತನಗೆ ಅನುರಾಗವಿದೆ ಎನ್ನುತ್ತಾನೆ. ಅದನ್ನು ಕಾರ್ಯರೂಪವಾಗಿ ತೋರಿಸಲಿಕ್ಕೆ ಧೀರವಿರಾಗವೂ ಬೇಕು ಎಂಬುದನ್ನು ಮರೆತೇ ಬಿಟ್ಟಿದ್ದಾನೆ. ತ್ಯಾಗವಿಲ್ಲದೆ ಅನುರಾಗವೇ ?

ಮೋಹನ :—ಅದಕ್ಕೇ ನಾನು ಕಾಮ ಎನ್ನುವುದು. ಪ್ರೇಮವು ತ್ಯಾಗದ ಮನೆ ತ್ಯಾಗದ ಕೊನೆ.

ಕುಮುದ :—ಆದರೂ ತ್ಯಾಗವನ್ನುಪದೇಶಿಸುವವರು ಮಾತ್ರ ಎಷ್ಟು ಮಂದಿ ಇದ್ದಾರೆ ನೋಡಿ ನಮ್ಮಲ್ಲಿ ! ಹರಿಕಥೆಯಲ್ಲಿಯೂ ತ್ಯಾಗವೇ, ಪುರಾಣ ಹೇಳುವದರಲ್ಲಿಯೂ ತ್ಯಾಗವೇ......

ಮೋಹನ :—ಹಾಗನ್ನಲಿಕ್ಕೂ ಅವರಿಗೆ ಕೂಲಿ ಬರಬೇಕು! ಅದನ್ನೂ ಪುಣ್ಯಕ್ಕೆ ಮಾಡುವವನಿಲ್ಲ, ಕುಮುದಾದೇವೀ ! ಕಳ್ಳರು...ಠಕ್ಕರು ...ಧಿಕ್ಕಾರವಿರಲಿ ಅವರ ಗಂಡಸುತನಕ್ಕೆ. ಧರ್ಮಾಸ್ಪತ್ರೆ, ಶಾಲೆ, ಆಶ್ರಮಗಳನ್ನಿಡುವವರಿದ್ದಾರೆ ಆ ಗಂಡಸರ ಗುಂಪಿನಲ್ಲಿ. ನಮ್ಮಲ್ಲಿ ದೇಶಭಕ್ತರಾಗಿ ದೇಶಮಾತೆಯ ಸ್ವಾತಂತ್ರ್ಯಕ್ಕಾಗಿ ಕಾದಾಡುವವರಿದ್ದಾರೆ. ಗೋಭಕ್ತರಾಗಿ ಕಟುಕರ ಕೈಯಿಂದ ಗೋಮಾತೆಯನ್ನು ಸಂರಕ್ಷಿಸುವವರಿದ್ದಾರೆ. ಆದರೆ ಈ ಬೃಹಸ್ಪತಿಗಳಲ್ಲಿ ನಾಳೆಯ ಮಾನವ ಮಾತೆಯನ್ನು ಮಾತ್ರ ಕೇಳುವವರಿಗೆ ದಿಕ್ಕೇ ಇಲ್ಲ. ಬಾಲ್ಯ ವಿವಾಹದ ಅಜಾನಪರಂಪರೆಗಳಿಂದ ಜರ್ಜರಿತವಾದ ಸಂತಾನಕ್ಕಾಗಿ

ಯೇಯೋ ಏನೋ ಈ ಧರ್ಮಶಾಸ್ತ್ರಗಳನ್ನೂ ಮುಂಚಿತವಾಗಿಯೇ ಇಟ್ಟು ನಡೆಸುತ್ತಿರುವುದು ! " ಮಾತೃದೇವೋ ಭವ " ಎಂದು ಜಪಿಸುವವರಿಗೆ ಹತ್ತು ಹನ್ನೆರಡು ವರ್ಷಗಳು ಹುಡುಗಿಗಾದೊಡನೆಯೇ ಹುಳಕ್ಕೆ ಸಮಾನಳಾಗುತ್ತಾಳಲ್ಲವೇ ಅವಳು ! ಹೆಕ್ಕಿ ಹೊರಗೆ ಹಾಕಿದರಾಯಿತು-ವಿವಾಹಧರ್ಮವು ಅಲ್ಲಿಗೇ ತೀರಿತು !

ಕುಮುದಾದೇವೀ – ಬನ್ನಿ – ಈಗ ಹಿಡಿದ ಹಟವನ್ನು ಬಿಡಬಾರದು. ರಮಾ ರಮೇಶರ ಲಗ್ನವಾಗಿಯೇ ತೀರಬೇಕು--(ಇಬ್ಬರೂ ಹೋಗುತ್ತಾರೆ. ಇದಿರಾಗಿ ಬರುತ್ತಿದ್ದ ಗುಂಡೂರಾಯನೊಡನೆ ಮೋಹನನು ಮತ್ತೆ ಬರುತ್ತಾನೆ.)

ಗುಂಡೂ :—(ಗೊಣಗುಟ್ಟುತ್ತಾ) ಇದ್ದೀತು, ಇದ್ದೀತು ಹಾಗೆ. ಅದೇನೂ ಅಸಂಭವವಲ್ಲ.

ಮೋಹನ :—ಆಕೆಯೇ ನನಗೆ ಹೇಳಿದಳು.........ಆದರೆ ಈ ದಿನ ನನ್ನ ಲಾಲ್‌ಬಾಗಿಗೆ * ಸಂಗುನಾಮ ಬಿತ್ತು ನೋಡು ನಿನ್ನ ಆಗಮನದಿಂದ,

ಗುಂಡೂ :—ಹೋಗಲಿಬಿಡೋ–ಇಲ್ಲಿ ಕೇಳು ಸ್ವಲ್ಪ. (ಹಿಗ್ಗಿ) ಅಂಥಾ ಕಾಲೇಜಿನ ಹುಡುಗಿ ನನನ್ನು ಮೆಚ್ಚಬೇಕಾದರೆ ನನ್ನಲ್ಲೇನಾದರೂ ಗುಣವಿದ್ದೇ ತೀರಬೇಕಾಯಿತಲ್ಲವೇ ಹಾಗಾದರೆ.

ಮೋಹನ :—ಗುಣವೇ ! ಕಸ್ತೂರಿ ಮೃಗಕ್ಕೆ ತನ್ನಲ್ಲಿರುವುದೇನು ಗೊತ್ತು ! ಕಾಡೆಲ್ಲ ಹಾರ್‍ಯಾಡಿಕೊಂಡು ಹುಡುಕುತ್ತದೆ ಅದು. ಆದರೆ ಗುಣವೇನೋ ಗುಟ್ಟಾಗಿ ಒಳಗೇ ಸಿಕ್ಕಿಕೊಂಡು ಇರುವುದಲ್ಲವೇ. ಹಾಗೇ (ಬೆನ್ನುತಟ್ಟಿ) ನಮ್ಮೀ ಮೃಗ.

---

* ಸಂಜೆಹೊತ್ತು ಬೆಂಗಳೂರಿನಲ್ಲಿ ವಿಹಾರಾರ್ಥ ಜನರು ಲಾಲ್‌ಬಾಗಿಗೆ ಹೋಗುತ್ತಾರೆ. ನಾಟಕವನ್ನು ಆಡುವವರು ತಮ್ಮಲ್ಲಿಯ ಪ್ರಸಿದ್ಧ ವಿಹಾರ ಸ್ಥಾನದ ಹೆಸರನ್ನು ಹಾಕುವದುತ್ತಮ.

ಗುಂಡೂ :—ನೀನೇನಪ್ಪಾ, ಕವಿ ನೀನು, ಏನಾದರೂ ಅನ್ನುತ್ತೀ, ಇಲ್ಲಿ ನೋಡು

ಮೋಹನ :—ಹ್ಯಾಗೆ ನೋಡಲಿ ಹೇಳು ?

ಗುಂಡೂ :—ಈಗ ಇಂಥ ಪ್ರಸಂಗದಲ್ಲಿ ತಮಾಷೆ ಮಾಡಬೇಡ ಅವಳು ಕಬೂಲಾಗಿದ್ದರೂ ಅವಳಪ್ಪ ಕಬೂಲೋ ನಿನ್ನ ಮಾತಿಗೆ ?

ಮೋಹನ :—ಎಲೋ, ಅವಳಪ್ಪನಪ್ಪ ಸಹ ಕಬೂಲ್.

ಗುಂಡೂ :—ಸರಿ, ವರದಕ್ಷಿಣೆಗಾಗಿ ಏನು ಮಾಡುತ್ತೀ ?

ಮೋಹನ: —ಅದಕ್ಕಾಗಿ ಅವಳಪ್ಪನಿಗೇನು ನನ್ನ ಮಾನಸಿಗಿರುವ ಹಾಗೆ ದಾರಿದ್ರ್ಯವೇ ?

ಗುಂಡೂ :—ಅದೊಂದೊಳ್ಳೇದಾಯಿತು. ಇಲ್ಲವಾದರೆ ದೊಡ್ಡ ಪಂಚಾಯಿತಿ ಆಗುತ್ತಿತ್ತು. ಯಾಕೆಂದರೆ ನನಗೆ ಅವಳಿಗಾಗಿ, ನನ್ನ ಪ್ರೇಮಕ್ಕಾಗಿ ಅವಳನ್ನು ಮದುವೆ ಮಾಡಿಕೊಳ್ಳಬೇಕೆಂದಿದ್ದರೂ, ನನ್ನ ಮನೆತನದ ಮರ್ಯಾದೆಯನ್ನೂ ಕಾಪಾಡಬೇಕಲ್ಲವೇ ನಾನು ? ವರದಕ್ಷಿಣೆ ಇಲ್ಲದೇ ಅದು ಹೇಗಾದೀತು ? ನೋಡು. ಇದೊಂದು ಮನೆತನದ ಮರ್ಯಾದೆಯ ವಿಷಯ. ಅದಕ್ಕಾಗಿ ಪ್ರೇಮವನ್ನೂ ಸಹ ಸ್ವ......ಲ್ಪ ದೂರಮಾಡಲೇ ಬೇಕಾಗುತ್ತದೆ.

ಮೋಹನ :—ಅವಳು ತಂದೆಗೊಬ್ಬಳೇ ಹುಡುಗಿ. ಅವಳ ಲಗ್ನಕ್ಕಾಗಿ ಆತನು ಬೇಡಿದ್ದನ್ನು ಕೊಡದಿರುತ್ತಾನೆಯೇ ?

ಗುಂಡೂ :—ಇರಲಿ, ಅವಳು ಕಾಲೇಜಿನಲ್ಲಿ ಓದುತ್ತಾಳಂತೆ--

ಮೋಹನ :—ಬರುವ ವರ್ಷ ಬಿ. ಎ. ಪಾಸ್ ಆಗುತ್ತಾಳೆ.

ಗುಂಡೂ:—ಕಷ್ಟವೇನಿರಲಿಕ್ಕಿಲ್ಲವಷ್ಟೇ ಮುಂದಕ್ಕೆ ? "ಓದಿದ ಹುಡುಗಿ ವಾದಿಸಿ ಕೊಲ್ಲುತ್ತಾಳೆ, ಬರೆಯುವ ಹುಡುಗಿ ಬರೆಹಾಕಿ ಹೋಗುತ್ತಾಳೆ" ಎಂದು ನಮ್ಮಮ್ಮ ಯಾವಾಗಲೂ ಹೇಳುತ್ತಿದ್ದಳು.

ಮೋಹನ :—ಅದಕ್ಕೇ ನಿನ್ನಂಥಾ ಪುತ್ರರತ್ನವು ಹುಟ್ಟಿದೆ. ಸರಿ, ಹೆಂಡತಿ ಆದಮೇಲೆ ಅವಳದೇನು ನಡೆಯುತ್ತದೆ?

ಗುಂಡೂ :—ಇಲ್ಲ, ಆ ಭಯ ನನಗಿಲ್ಲ. ಕಾಲಮೆಟ್ಟು ಹೇಗಿಡಬೇಕೆಂಬುದು ನನಗೆ ಚೆನ್ನಾಗಿಯೇ ಗೊತ್ತು.

ಮೋಹನ :—ಅದಕ್ಕಾಗಿ ಸುಶಿಕ್ಷಿತ ಹುಡುಗಿಯರನ್ನೇ ಮಾಡಿಕೊಳ್ಳಬೇಕು ನೋಡು ಅವರ ಸೊಕ್ಕು ಮುರಿಯಲಿಕ್ಕೆ. ಓದಿದ ಹುಡುಗಿಗೆ ಸ್ವಾತಂತ್ರ್ಯದ ಆಶೆ ಬಹಳ. ಹೊರಗೆ ಹೋಗಿ ಅವಳಿಗೊಂದು ಕೆಲಸ ಮಾಡಲಿಕ್ಕೆ ಸ್ವಾತಂತ್ರ್ಯವೇನೋ ಸಿಕ್ಕಿದಂತಾಯಿತವಳಿಗೆ. ನೀನು ಚೆನ್ನಾಗಿ ಕೂತು ತಿನ್ನಬಹುದು ಅವಳು ಗಳಿಸಿದ್ದನ್ನು. ಅವಳಿಗೂ ಸ್ವಾತಂತ್ರ್ಯ. ನಿನಗೂ ಸ್ವಾತಂತ್ರ್ಯ. ಭಾರ್ಯೆಗೆ ಔದಾರ್ಯ. ಇಲ್ಲಿ ನಿನ್ನ ಸತ್ಕಾರ್ಯ, (ಉಣ್ಣುವುದನ್ನು ನಟಿಸಿ) ಘನಕಾರ್ಯಕ್ಕೂ ಒಳ್ಳೇ ಸೌಕರ್ಯ.

ಗುಂಡೂ :—ಇದೇನೋ ಯೋಚಿಸ ತಕ್ಕ ವಿಷಯವೇ.

ಮೋಹನ :—ಗುಂಡೂ, ನೀನೇ ನೋಡು ಗಂಡು!

ಗುಂಡೂ :—ಆದರೆ ಅವಳನ್ನು ಒಮ್ಮೆ ನೋಡಬೇಕು.

ಮೋಹನ :—ಹಾದಿಯಲ್ಲಿ ನೀನೀಗ ನೋಡಿದೆಯಲ್ಲಾ? ರಮೆಯನ್ನು ನೋಡಲಿಕ್ಕೆ ಹೋದಾಗಲೂ ಅವಳನ್ನಲ್ಲಿಯೇ ನೋಡಿದ್ದೀ.

ಗುಂಡೂ :—ಅದೇನು ಲೆಕ್ಕ! ಹಾಗೆ ನೋಡುವುದಕ್ಕೂ ಲಗ್ನಕ್ಕಾಗಿ ನೋಡುವುದಕ್ಕೂ ಎಷ್ಟೋ ವ್ಯತ್ಯಾಸವಿದೆ, ನಿನಗೆ ಗೊತ್ತಿಲ್ಲ ಅದೆಲ್ಲ.

ಮೋಹನ :—ಸರಿ.

ಗುಂಡೂ :—ಹಾಗಾದರೆ ನೋಡಬೇಕು.

ಮೋಹನ :—ನೀನು ಅಲ್ಲಿಯೇನು ಮಾಡುತ್ತೀಯೋ?

ಗುಂಡೂ :—ಏನು ಮಾಡಬೇಕು ? ಎಲ್ಲ ಹೇಳಿಬಿಡು. ನೋಡಲಿಕ್ಕೆ ಹೋದಾಗ ಏನೇನು ಮಾಡಬೇಕಾಗಿದೆ ಎಂಬುದರ ವಿಷಯ ನಾನು ಒಂದು ಪ್ರಶ್ನೆಗಳ ಪಟ್ಟಿ ತಯಾರು ಮಾಡಿಬಿಟ್ಟಿದ್ದೇನೆ. ಅದರ ಒಂದು ನಕಲು ಇದೊ......ನಿನಗೂ (ಕೊಡುತ್ತಾನೆ)

ಮೋಹನ :—ಮತ್ತೆ, ನೋಡಲಿಕ್ಕೆ ಈ ಹೊತ್ತೇ ಹೋಗೋಣವೋ?

ಗುಂಡೂ :—ಸದಾ ಸಿದ್ಧನೇ.

ಮೋಹನ :—ಈಗಲೇ ಆಕೆಯು ಮಾವನ ಮನೆಗೆ ಬಂದಿರಬಹುದು. ಅಲ್ಲಿ ನೋಡಲಿಕ್ಕೆ ನಿನಗೇನಾದರೂ ಆಕ್ಷೇಪಣೆಯಿದೆಯೋ ?

ಗುಂಡೂ:—ಛೇ, ಛೇ.

[ಹೋಗುತ್ತಾರೆ]

## ಅಂಕ ೨ ದೃಶ್ಯ ೩

[ನೀಲಕಂಠ ಶಾಸ್ತ್ರಿಗಳ ಮನೆ. ಕುಮುದೆಯು ಒಳಗಿನಿಂದ ಹಾಡುತ್ತಾಳೆ. ವಿಮಲೆ ಹೊರಗೆ ಏನೋ ಬರೆಯುತ್ತಿದ್ದಾಳೆ. ಮೋಹನ ಗುಂಡೂ ಬರುತ್ತಾರೆ.]

ಮೋಹನ :—(ಒಂದು ಪಕ್ಕದಿಂದ) ಅದೋ ಹಾಡುತ್ತಾಳೆ. ವಿಮಲಾ, ಕುಮುದಾದೇವಿಯನ್ನು ಸ್ವಲ್ಪ (ಅನ್ನುವಷ್ಟರಲ್ಲಿಯೇ) ನಾನು ಕರೆದುಕೊಂಡು ಬರುತ್ತೇನೆ (ಎಂದು ಒಳಗೆ ಹೋಗುತ್ತಾಳೆ. ಕುಮುದೆಯನ್ನು ಎಳೆದಂತೆ ಕರಕೊಂಡು ಬರುತ್ತಾಳೆ. ಕುಮುದೆಯು ಬಂದು ಕೂತುಕೊಳ್ಳುತ್ತಾಳೆ. ಪಕ್ಕದಲ್ಲಿ ವಿಮಲೆಯು. ಈ ಹುಡುಗಿಯು ಕೂತಿದ್ದುದರ ಉದ್ದೇಶವು ಹುಡುಗಾಟಿಕೆಯಿಂದ ಗುಂಡುರಾಯನನ್ನು ಕೀಟಲೆಮಾಡುವುದೇ. ಮೋಹನ ಕುಮುದ ಇಬ್ಬರೂ ಬಾಯಿಯಿಂದ ಆಕೆಯನ್ನು ನಿರೋಧಿಸಿದಂತೆ ಆಡಿದರೂ ನಿಜವಾಗಿಯೂ ಆಕೆಯ ಮಾತುಗಳನ್ನು ಇಬ್ಬರೂ ಬೇಕೆನ್ನುವವರೇ.)

ಗುಂಡೂ :—(ಸ್ವ) ಏನು ವ್ಯತ್ಯಾಸ ! ಮೊನ್ನೆ ಎಷ್ಟು ಜೋರಾಗಿ ಮಾತಾಡುತ್ತಿದ್ದಳು. ಈ ದಿವಸದ ಮಾತೇ ಬೇರೆ ! ಏನು ಲಜ್ಜೆ !

ಗಾಂಭೀರ್ಯ......ಇದೆಲ್ಲ ನನ್ನ ಪ್ರಭಾವ...ಅಲ್ಲವೇ (ಕುಮುದೆಗೆ) ಹುಂ - ನಿಮ್ಮ ಹೆಸರೇನು ?

ಕುಮುದ :—ಕುಮುದ.

ಗುಂಡೂ :—ನಿಮ್ಮ ತಂದೆಯುವರ ಹೇಸರೇನು ?
ಕುಮುದ :— ರಾವ್‌ಬಹದೂರ್ ಶಿವರಾವ್.

ಗುಂಡೂ :—ಅವರು ಬದುಕಿದ್ದಾರೇನು ?

ಕುಮುದ :—ಇದ್ದಾರೆ.

ವಿಮಲ :—(ಗುಂಡೂಗೆ) ನಿಮ್ಮ ಯುಜಮಾನರು ಇದ್ದಾರೋ ?

ಗುಂಡೂ :—ಯಾಕಿಲ್ಲ ?

ಮೋಹನ :—ವಿಮಲಾ, ನೀನು ನಡುವೆ ಹೇಳಬೇಡ.

ಗುಂಡೂ :—(ಸ್ವ) ಮರೆತು ಹೋಯಿತು. ಮುಂದಿನ ಪ್ರಶ್ನೆ (ಪಟ್ಟಿ ತೆಗೆದು ನೋಡಿ) (ಪ್ರ) ನೀವೆಷ್ಟುಮಂದಿ ಅಣ್ಣತಮ್ಮಂದಿರು ?

ಕುಮುದ :—(ಒಂದು ಪಟ್ಟಿಯುನ್ನು ಮುಂದಿಟ್ಟು ನಾಚಿದಂತೆ ಹೇಳು ತ್ತಾಳೆ) ತಮ್ಮ ಪಟ್ಟಿ ಪ್ರಕಾರ ಎಲ್ಲಾ ಪ್ರಶ್ನೆಗಳನ್ನು ಬಿಡಿಸಿಟ್ಟಿದ್ದೇನಿದ ರಲ್ಲಿ, ಅವನ್ನು ನಾನು ಮೊದಲೇ ಕೇಳಿದ್ದೆ. ನೋಡಿಕೊಳ್ಳ ಬಹುದು.

ಗುಂಡೂ :—(ಸ್ವ) ಒಳ್ಳೇ ಹುಷಾರಾಗಿದ್ದಾಳೆ. ಹುಷಾರ್! (ಅವಳಿಗೆ) ನೀವು ಓದಬಲ್ಲವರಾಗಿದ್ದುದರಿಂದ ಓದಿಸಿ ನೋಡುವ ಅಗತ್ಯವಿಲ್ಲ. ಬಾರದಿದ್ದ ಮೂರ್ಖರಿಗೆ ಈ ಪರಿಕ್ಷೆಯೆಲ್ಲಾ. ಈಗ ನಿಮ್ಮ ಮಾತು ಕೇಳಬೇಕೆಂದು ಮಾತಾಡಿದೆ. ಇರಲಿ ಈಗ (ಪಟ್ಟಿನೋಡಿ) 'ಹಲ್ಲು' (ಕುಮುದೆಗೆ) ಬಾಯಿ ತೆರೆದು ಹಲ್ಲು ತೋರಿಸಿರಿ ನೋಡುವ.

ವಿಮಲ :—ಅದೇನು ಕುದುರೆಯೋ ?

ಗುಂಡೂ :—ಅಲ್ಲೋ ಮೋಹನ್, ಹಲ್ಲು ನೋಡದೆ ವಯಸ್ಸು ಹೇಗೆ ಗೊತ್ತಾಗಬೇಕೋ ? ನೀನೇ ಹೇಳು.

ವಿಮಲ :—ತೋರಿಸಕ್ಕಾ ತೋರಿಸು.

ಮೋಹನ :—ತೋರಿಸಿ - ಹುಂ - ಆಗಲಿ.

ಕುಮುದ :—(ಬಾಯಿಬಿಚ್ಚಿ ತೋರಿಸುತ್ತಾಳೆ)

ವಿಮಲ :—(ಗಟ್ಟಿಯಾಗಿ ನಗುತ್ತ) ಥೇ, ಥೇ ಇದೇನಕ್ಕಾ ಇದು, ಮಂಗ ನಿಗೆ ಹಲ್ಲು ಕಿರಿಚಿ ತೋರಿಸಿ ಆಡಿಕೊಂಡ ಹಾಗೆ. (ತಡೆಯಲಾರದಂತೆ

ನಗುತ್ತಾ) ಏನಕ್ಕಾ ಇದು...ಪಾ...ಪ.

ಗುಂಡೂ :—ವಯಸ್ಸೆಷ್ಟು ನಿಮಗೀಗ ?

ವಿಮಲ :—ಎಂಟು, ' ಅಷ್ಟವರ್ಷಾತ್ ಭವೇತ್ಕನ್ಯಾ " ಅದಕ್ಕೆ ಸರಿಯಾಗಿ ಯೇ ಇದೆಯಲ್ಲ.

ಗುಂಡೂ :—ಇದ್ದರೂ ಇರಬಹುದು ದೊಡ್ಡವರ ಹುಡುಗಿ, ಹಾಲುತುಪ್ಪ ಮಸ್ತಾಗಿದೆ.

ಕುಮುದ :—ಅಲ್ಲ, ಹತ್ತರಮೇಲೆ ಎಂಟು

ಗುಂಡೂ :—ಅಷ್ಟೇ ಇರಬಹುದು, ಮೋರೆಯಲ್ಲೇಕೋ ಅಷ್ಟೇ ಕಾಣುತ್ತಾ ಇದೆ. ಸರಿ, ಹೋಗಿ.

ಸ್ವಲ್ಪ ನಡೆದು ಹೋಗಿ ಈಗ. (ಅವಳು ಹೋಗುವುದಿಲ್ಲ) ನಡೀರಿ ಸ್ವಲ್ಪ.

ವಿಮಲ :—ಇವರ ಸಂಗತಿಯನ್ನೂ ಸ್ವಲ್ಪ ತಿಳಿದುಕೊಳ್ಳಬೇಕಲ್ಲವೇ ಅಕ್ಕಾ.

ಗುಂಡೂ :—ಅದೇನು ? ಅದೇನು ?

ಕುಮುದ :— ಇದು ಸಮಾನಾಧಿಕಾರದ ಕಾಲ ಎಂದು (ಮೋಹನನನ್ನು ತೋರಿಸಿ) ಇಂಥವರು ಹೇಳುತ್ತಾರೆ. ಹುಡುಗರಿಗೆ ಹುಡುಗಿಯರು ಸರಿಹೋಗಬೇಕಲ್ಲವೆ ? ಹಾಗೆಯೇ ಹುಡುಗಿಯರಿಗೂ ಹುಡುಗರು......ಸ್ವಲ್ಪ...

ಗುಂಡೂ :—ಇದೇನು ಫಜೀತಿ (ಮೋಹನನಿಗೆ) ಏನು ಮಾಡಬೇಕೀಗ ?

ಮೋಹನ :—ಬಂದದ್ದನ್ನು ನೋಡಿಕೊಳ್ಳಬೇಕು. ಅದೇ ಗಂಡಸುತನ, ಗುಂಡೂರಾವ್.

ಕುಮುದ :—ತಮ್ಮ ನಾಮಧೇಯವೇನು ?

ಗುಂಡೂ :—ಗುಂಡೂರಾವ್.

ಕುಮುದ:—ಗೋತ್ರ ?

ಗುಂಡೂ :—ಗೋತ್ರ! ಗೋತ್ರ ಅದರಲ್ಲೇ ಇದೆ ಅಷ್ಟು ತಿಳಿಯುವುದಿಲ್ಲವೇ (ನಗುತ್ತಾ) ಹೆಂಗಸು ಪಾಪ ! ರಾವ್ ಅಂದರೆ ರಾಯರ ಗೋತ್ರ.

ಕುಮುದ :—ನಿಮ್ಮ ಗೋತ್ರಕ್ಕೆ ಪ್ರವರಗಳೆಷ್ಟು ?

ಗುಂಡೂ :—(ಮೆಲ್ಲನೆ ಮೋಹನನಿಗೆ) ಪ್ರವರಗಳೆಂದರೇನೋ ಅದು ?

ಮೋಹನ :— ಪ್ರವರವೆಂದರೆ ಕಷ್ಟವೇನು ? 'ಪ್ರ' ಎಂದರೆ ಪ್ರಕರ್ಷಕ ಅಂದರೆ ಬೇಕಾದ; ವರ ಎಂದರೆ ವಧುವಿನ ಪುಲ್ಲಿಂಗ.

ಗುಂಡೂ :—(ನಕ್ಕು) ಹಾಗಾದರೆ ನಾನೇ ! ನಾನೇ ನಿಸ್ಸಂದೇಹವಾಗಿ ನಾನೇ.

ಕುಮುದ :—ಬಂಧು ಬಳಗ ?

ಗುಂಡೂ :—ಯಾರೂ ಇಲ್ಲ.

ಕುಮುದ :—ಇಂಗ್ಲಿಷ್ ಶಿಕ್ಷಣ ಚೆನ್ನಾಗಿಯೇ ಇರಬಹುದಲ್ಲವೇ ?

ಗುಂಡೂ :—ಅದೇನಷ್ಟಿಲ್ಲ. ಆ ಪರದೇಶದ ಭಾಷೆಯೆಂದರೆ ನನಗೆ ಸರಿ ಹೋಗುವುದೇ ಇಲ್ಲ. ಆದರೂ ಎಷ್ಟೋ ವರ್ಷ ಹೈಸ್ಕೂಲಿನಲ್ಲಿದ್ದೆ.

ವಿಮಲ :—ಅಂದರೆ ಫೇಲ್ ‡ ಆಗಿಯೋ ಏನೋ, ಆಸನ ಜಮಾಯಿಸಿದ್ದು (ಎಂದು ನಗುತ್ತಾಳೆ)

ಮೋಹನ :—(ಸ್ವ) ಎಂಭತ್ತೈದನೇ ಆಸನ ಇದು. ದೀರ್ಘತಮಾಸನ.

ವಿಮಲ :—ಸ್ವಲ್ಪ ರಮೆಯನ್ನು ನಡಿಸಿ ನೋಡಿದಹಾಗೆ ನೋಡಬೇಕಕ್ಕಾ.

ಗುಂಡೂ :—ಅವಳು ಹುಡುಗಿ.

ವಿಮಲ :—ನೀವು ಹುಡುಗರು. ಅಕ್ಕಾ (ಕುಮುದೆಗೆ) ಹುಡುಗನನ್ನು ಸ್ವಲ್ಪ ನಡಿಸಿ ನೋಡಬೇಕಮ್ಮ (ಗುಂಡುಗೆ) ಅಕ್ಕ ನಿಮ್ಮನ್ನು ನೋಡಲಿಕ್ಕೆ ಅಂತ ಇಲ್ಲಿಗೆ ಬಂದಿದ್ದಾಳೆ. ಸ್ವಲ್ಪ ನಡೆದು ತೋರಿಸಬಾರದೇ ?

ಮೋಹನ :—ಇದೇನೋ ನ್ಯಾಯವೇ ಸಯುಕ್ತಿಕವೇ.

ಗುಂಡೂ :—ನಾನು ನಡೆದು ತೋರಿಸಬೇಕೇ !!

ಮೋಹನ :—ಅದರಲ್ಲಿ ನಾಚಿಕೆಯೇನು ? ಹುಡುಗಿಯರನ್ನು ನಡಿಸುವುದಿಲ್ಲವೋ ನಾವು ನೋಡಲಿಕ್ಕೆ ? ಗಂಡಸರಿಗೆ ಯಾಕೋ ನಾಚಿಕೆ ? ನೀನು ಗಂಡಸು ಎಂದು ನಾನು ಹೇಳಬೇಕೇ ?

ಕುಮುದ :—ಅದು ಹೋಗಲಿ ಬಿಡಿ, ಆ ಹುಡುಗಿಯ ಮಾತು ತೆಗೆದುಕೊಂಡು ಏನು ಮಾಡುತ್ತೀರಿ ? ತಮಗೆ ಸಂಧ್ಯಾವಂದನೆ, ಗಾಯತ್ರಿ ಮಂತ್ರ ಮುಂತಾದ್ದು ಚೆನ್ನಾಗಿ ಗೊತ್ತಿರಬಹುದಲ್ಲವೇ ?

ಗುಂಡೂ :—ಶುದ್ಧ ಅವಮಾನವಿದು. ಹೆಂಗಸರು ಇಂಥಾ ಮಾತುಗಳನ್ನು ಕೂಡ ಉಚ್ಚರಿಸಬಾರದು ಎಂದು ಶಾಸ್ತ್ರವಿದೆ. ಗಾಯತ್ರಿ ಎಂಬ ಶಬ್ದ, ಮಂತ್ರ ಇವನ್ನೆಲ್ಲಾ ಗಂಡಸರು ಮಾತ್ರ ಹೇಳಬೇಕು.

---

‡ Fail

ಮೋಹನ :—ಸಿಟ್ಟಾಗಬೇಡ. ಅವರ ಉದ್ದೇಶ ನಿನ್ನ ಪರೀಕ್ಷೆಯಲ್ಲ. ಈ ಕಾಲದಲ್ಲಿ ಸಂಧ್ಯಾವಂದನೆಯಿಂದಲ್ಲವೇ ಬ್ರಾಹ್ಮಣ ಎಂದೆನಿಸುವುದು. ತಾನು ವರಿಸತಕ್ಕವನಿಗೆ ಏನೇನೂ ಯೋಗ್ಯತೆಯಿಲ್ಲವಾದರೂ ಕಡೆಗೆ ಆತನು ಬ್ರಾಹ್ಮಣನಾದರೂ ಹೌದೋ ಅಲ್ಲವೋ ಎಂದು ನೋಡಿ ಕೊಳ್ಳಬೇಕೋ ಬೇಡವೋ ? (ಕುಮುದೆಗೆ) ಅಷ್ಟಕ್ಕೇ ಅಲ್ಲವೆ ನಿಮ್ಮ ಪ್ರಶ್ನೆ ?

ಗುಂಡೂ :—ಛೆ, ನನಗೇನೋ ಇದೆಲ್ಲ ಚಮತ್ಕಾರವಾಗಿಯೇ ಇದೆ!

ವಿಮಲ :—ಹುಡುಗಿಯರಿಗೂ ಹಾಗೆಯೇ ತೋರುವದಿಲ್ಲವೆ ?

ಮೋಹನ :—ಆದರ ವಿದ್ಯೆಯಿಲ್ಲದೆ ಕೂಳಿಗೆ ಬೇರೆ ಗತಿಯಿಲ್ಲದೆ, ಇಂಥವರ ಧರ್ಮದಿಂದ ದಬಾಯಿಸಲ್ಪಟ್ಟು, ಹೇಳಲಿಕ್ಕೆ ಮಾತ್ರ ಗಾಬರಿ ಅವರಿಗೆ ಪಾಪ.

ಕುಮುದ :—ಮಕ್ಕಳ ವಿಷಯ ತಮ್ಮ ಅಭಿಪ್ರಾಯ ಆದರ್ಶಗಳೇನು ?

ಗುಂಡೂ :—ಸಣ್ಣ ಮಕ್ಕಳೆಂದರೆ ಬಲು ಅಸಹ್ಯ ನನಗೆ !

ವಿಮಲ :—ದನಕರುಗಳನ್ನು ನೋಡಿಕೊಳ್ಳಲಿಕ್ಕಾದರೂ ಬರುತ್ತದೆಯೋ ನಿಮಗೆ ?

ಮೋಹನ :—ಸುಮ್ಮನಿರೆಂದರೆ ಕೇಳುವುದಿಲ್ಲವೇ ನೀನು.

ಗುಂಡೂ :—ಆಕಳ ಆರೈಕೆ ಚೆನ್ನಾಗಿ ಬರುತ್ತದೆ ನನಗೆ! ಆಕಳ ಡಾಕ್ಟರ ನಲ್ಲವೇ ನಾನು ?

ವಿಮಲ :—ಓಹೋ ! ಹೆಂಗಸೆಂದರೆ ದನಗಳೋ ನಿಮ್ಮ ಕಣ್ಣಿಗೆ.

ಗುಂಡೂ:—ಹೆಚ್ಚು ಕಡೆಗೆ ಅಷ್ಟೇ ಅಲ್ಲವೆ? ಪತಿವ್ರತೆಯು ದನದಂತಿರಬೇಕು ಎಂದಲ್ಲವೇ ಹಿರಿಯರು ಹೇಳುವುದು.

ವಿಮಲ :—ಹಾಗಾದರೆ ಎತ್ತುಗಳೋ ಆ ದನಗಳ ಗಂಡಂದಿರು ನೀವು ?

ಕುಮುದ :—ವಿಮಲಾ, ಸುಮ್ಮನಿರಬಾರದೆ (ಗುಂಡುಗೆ) ತಮಗೂ ಲಗ್ನ ಮಾಡಿಕೊಳ್ಳುವ ಇಚ್ಛೆ ಇದೆಯೋ ?

ಗುಂಡೂ :—ಇದೇನು ಹೀಗೆ ಕೇಳುತ್ತೀರಿ? ಲಗ್ನಮಾಡಿಕೊಳ್ಳುವುದು ಗಂಡಸಿನ ಹಕ್ಕು.

ವಿಮಲ :—ಹೆಂಗಸರದಲ್ಲವೋ ಮತ್ತೆ ಬೇಕಾದ ಹುಡುಗರನ್ನು ಮಾಡಿಕೊಳ್ಳುವುದು ?

ಗುಂಡೂ :—ಅಲ್ಲವೆಂದರೂ ನಡೆಯುತ್ತದೆ.

ಕುಮುದ :—ಹುಡುಗಿಯು ಎಂಥವಳಿರಬೇಕು ?

ಗುಂಡೂ :—ಸಂಸಾರ ಸಾಗರದಲ್ಲಿ ಹುಡುಗಿಯು ಹಡಗದಂತಿರಬೇಕು ? ಆವಾಗಲೇ ಅದರಿಂದ ಪಾರಾಗುವುದು. (ಎನ್ನುತ್ತ ಎದ್ದುಹೋಗಿ ಒಂದು ಪಕ್ಕದಲ್ಲಿ ನಸ್ಯವನ್ನು ಹಾಕಿಕೊಳ್ಳುತ್ತಾನೆ.)

ವಿಮಲ :—ಓಹೋ ಹೋ - ಕಾವ್ಯ - ಕಾವ್ಯ - ಆದರೆ ಮದುವೆಗೆ ಮೊದಲೇ ಸಂಸಾರವೆಲ್ಲಿಂದ ಬಂತೊ ಈ ಪ್ರಾಣಿಗೆ !

ಮೋಹನ :—(ಕುಮುದೆಗೆ) ಬರೇ ಕಂಠಪಾಠ! ವೈದಿಕ ಬ್ರಾಹ್ಮಣರೋ ಹಳ್ಳಿಯ ಮುದುಕರೋ ಯಾರೋ ಹೇಳಿದ ಮಾತುಗಳನ್ನೆಲ್ಲ ಒಪ್ಪಿಸುತ್ತಿದ್ದಾನೆ. (ಗುಂಡೂ ಬಂದಮೇಲೆ ಕುಮುದೆಗೆ) ಲಗ್ನವಾದ ಮೇಲೆ ತಮ್ಮ ಹೆಂಡತಿಯೊಡನೆ ಹೇಗೆ ವರ್ತಿಸುವಿರಿ ಎಂದು ಕೇಳಿ.

ಗುಂಡೂ :—ಇತರ ನಾಲ್ಕು ಮಂದಿ ಹೇಗೋ ಹಾಗೆಯೇ. ಅದೇನು ದೊಡ್ಡ ವಿಷಯ. ಸ್ವಲ್ಪ ಹತೋಟಿಯಲ್ಲಿಟ್ಟುಕೊಂಡರೆ ಹೆಂಗಸರು ನೂಲಿನ ಹಾಗೆ ನೆಟ್ಟಗೆ ಬಂದುಬಿಡುತ್ತಾರೆ.

ವಿಮಲ :—ಸಿಕ್ಕುಬಿದ್ದ ನೂಲಿನ ಹಾಗೆಯಲ್ಲವೇ ?

ಗುಂಡೂ :—(ಅರ್ಥವಾಗದೆ) ಹಾಗೇ, ಹಾಗೇ ಮತ್ತೆ.

ವಿಮಲ :—ಹೆಂಗಸರ ವಿಷಯ ತಮಗಿರುವ ಅಭಿಪ್ರಾಯ ಇನ್ನೂ ಹೆಂಗಸುತನ ಬಾಕಿ ಇರುವ ಹೆಂಗಸರಿಗೆ ಹ್ಯಾಗೆ ಸಮ್ಮತವಾಗುವುದೋ ಕಾಣೆ.

ಮೋಹನ :—ಗಂಡಸುತನ ಬಾಕಿ ಇರುವ ಗಂಡಸರಿಗೂ........ಆದರೆ ಮೀಸೆಯ ನಪುಂಸಕರ ರೀತಿ ಬೇರೆ. ಅವರಿಗೆ ಶಾಸ್ತ್ರವೇ ವಿಶೇಷ. ಶಾಸ್ತ್ರ ಒಂದಕ್ಕೊಂದಾದರೂ ಪರವಾಯಿಲ್ಲ. ಒಂದು ಶಾಸ್ತ್ರವಾವುದಾದರೂ ಇದ್ದೇ ತೀರಬೇಕು. ಗಣಿತಕ್ಕೆ ಗಾನಶಾಸ್ತ್ರ, ಗಾನಕ್ಕೆ ಗಣಿತಶಾಸ್ತ್ರ! ಹಾಗೆಯೇ ವಿವಾಹಕ್ಕೆ ಜ್ಯೋತಿಷ್ಯ ಶಾಸ್ತ್ರ! ಆರೋಗ್ಯ ಶಾಸ್ತ್ರವು ಬೇಕಾಗಿಲ್ಲ ಅದಕ್ಕೆ. ಸ್ಮೃತಿಗಳವೆ ಸಾಲದ್ದಕ್ಕೆ ಇನ್ನೂ ಬೇಕಾದರೆ ವ್ಯಾಕರಣವನ್ನು ಹಚ್ಚಬಹುದು ವಿವಾಹ ಕಾರ್ಯಕ್ಕೆ ಮಾರ್ಗದರ್ಶಿಯಾಗಿ. ವ್ಯಾಕರಣವೂ ಒಂದು ಶಾಸ್ತ್ರವೇ ಅಲ್ಲವೆ ಗುಂಡೂ. ಪುಲ್ಲಿಂಗಕ್ಕೊಂದು ಸ್ತ್ರೀಲಿಂಗ ಸೇರಿಸಿಬಿಟ್ಟರೆ ವಿವಾಹವಾಯಿತು. ಕನ್ಯಾದಾನವಾಯಿತು. ಧರ್ಮವಾಯಿತು. ಅಲ್ಲವೇನೋ ಗುಂಡೂ.

ಗುಂಡೂ :—(ಮೋಹನನ ಮಾತನ್ನು ಗಮನಿಸದೆ) ಮೋಹನ್, ಆ ಹುಡುಗಿ ರಮಾ ಎಷ್ಟು ಒಳ್ಳೆಯವಳೋ! ಸಾಧುಪ್ರಾಣಿ!...

ಕುಮುದ :—ಹೌದು ಅವಳು ಮಿತವಾದಿ * ನಾನೋ ಅಮಿತವಾದಿ. ‡

ಮೋಹನ :—ಹಿತವಾದಿಗಳಿಗೇ ಅಮಿತವಾದಿಗಳೆಂಬ ಅಪಕೀರ್ತಿ ಮೂರ್ಖರಲ್ಲಿ. ಆದರೆ ಈ ಹೊತ್ತು ಹೊಟ್ಟೆ ತಿಂದರೂ ನಾಳೆ ಮಿತವಾದಿಗಳು ಇವರ ಕಾರ್ಯ ಪ್ರಭಾವದಿಂದ ಒಳ್ಳೆಯ ಹಿಟ್ಟುಣ್ಣುತ್ತಾರೆ. ಇದೇ ಜಗತ್ತಿನ ರೀತಿ. ಅದರಲ್ಲಿಯೂ ನಮ್ಮ ದೇಶದ್ದು ವಿಶೇಷವಾಗಿ.

ಗುಂಡೂ :—(ಬಹಳವಾಗಿ ಯೋಚಿಸಿ) ಏನೋ ಬಹಳ ಮಾತಾಡುತ್ತೀರಿ ನೀವು. ನಾನೇನು ಮೂರ್ಖನೋ?

---

* Moderate ‡ Extremist.

ಕುಮುದ :--ಹೆಂಗಸರಿಗೆ ಮರ್ಯಾದೆ ಹೇಗೆ ಮಾಡಬೇಕೆಂದು ತಮಗೆ ಗೊತ್ತೇ ಇಲ್ಲವಷ್ಟೆ.

ಗುಂಡೂ :--ಏನು ! ಮರ್ಯಾದೆಯೋ ! ಇದೆಲ್ಲ ಇಂಗ್ಲಿಷರ ಚಾಳಿ. ಅವರು ಈಗೀಗ ಕೊಡುತ್ತಾ ಇದ್ದಾರೆ ಅದನ್ನು. ನಮ್ಮಲ್ಲಿಯೋ, ಕೊಡತಕ್ಕ ಮರ್ಯಾದೆ ಎಂದೋ ಕೊಟ್ಟಾಯಿತು. "ಮಾತೃ ದೇವೋಭವ" ಎಂದು ಮೊದಲೇ ಕೊಟ್ಟುಬಿಟ್ಟಿದ್ದಾರೆ. ಸಾಲ ತೀರಿ ಹೋಯಿತು. ಈಗ ಮತ್ತ್ಯಾಕೆ ಮರ್ಯಾದೆ. ಎಷ್ಟು ಸಲ ಕೊಡಬೇಕದನ್ನು ? ಅಯ್ಯೋ-ಎಲ್ಲಿ ನೋಡಿದರೂ ಕೆಂಪು ಮೋರೆಯವರ ನಕಲು ! ಅಯ್ಯಯ್ಯೋ...ಜಾಗ್ರತೆ...ಅವರ ಬಾಳು-ನಾವು ನಡಿಸಿದರೆ ಮನೆ ಹಾಳು ಗೊತ್ತೋ ನಿಮಗೆ.

ಕುಮುದ :--(ಎದ್ದು ಬೇಗನೆ, ಹೋಗುತ್ತಾ)-ನೋಡಿ ಆಯಿತು, ನಮಸ್ಕಾರ.

ಗುಂಡೂ :--ಮೋಹನ್ ! !

ಮೋಹನ :--ಗುಂಡೂ ! !

ಗುಂಡೂ :--ಏನೋ-ಇನ್ನೆಲ್ಲಿಯೋ...... !

ಮೋಹನ :--ಹಾದಿಯೋ-ಅದೋ (ಹೊರಹಾದಿಯನ್ನು ತೋರಿಸುತ್ತಾನೆ)

[ತೆರೆಯು ಬೀಳುತ್ತದೆ.]

## ಅಂಕ ೩—ದೃಶ್ಯ ೧

[ಶಿವರಾಯನ ಮನೆ. ಒಳಭಾಗದಲ್ಲಿ ಆತನು ಒಂದು ಮಂಚದ ಮೇಲೆ ಮಲಗಿರುತ್ತಾನೆ. ಹೊರಗಡೆ ಮೇಜು. ಅದರ ಮೇಲೊಂದು 'ಟೇಬಲ್ ಲ್ಯಾಂಪ್' ಇದೆ. ಸುತ್ತಮುತ್ತ ಕುರ್ಚಿಗಳೂ ಇವೆ. ಮೇಜಿನಮೇಲೆ ಕೆಲವು ಪುಸ್ತಕಗಳೂ ಇವೆ. ಶಿವರಾಯನ ಮಂಚವು ಬಾಗಿಲ ಬಲಗಡೆಯಲ್ಲಿರುವ ಕಿಟಕಿಯ ಹಿಂದಿದೆ. ಎಡಗಡೆಯ ಕಿಟಕಿಯ ಹಿಂದೆ ಕಬ್ಬಿಣದ ಪೆಟ್ಟಿಗೆ (Safe) ಇದೆ. ಈ ಮನೆಗೆ ಮಾಳಿಗೆಯಿದ್ದು ಅಲ್ಲಿ ಶಿವರಾಯನು ಮಲಗಿರುವ ಕೋಣೆಯನ್ನು ತೋರಿಸುವುದು ಮೇಲು.]

ರಮೇಶ.--(ಪ್ರವೇಶ)ನನ್ನ ತಂದೆಯ ಪೆಟ್ಟಿಗೆಗೆ ನನ್ನ ಕನ್ನವೇ! ಈ ದರೋಡೆ ನವೀನವಲ್ಲವೆ ? ನನ್ನ ಪೆಟ್ಟಿಗೆಗೆ ನನ್ನ ಏಟು !... ಇದೇನು ತಪ್ಪಲ್ಲ: ಆದರೆ ಅದು ನನ್ನ ಕಣ್ಣಿಗೆ ಹಾಗೆ. ನನ್ನಪ್ಪನ ದೃಷ್ಟಿಗೂ ಹಾಗೇಯೊ? ನಮಗೆ ಯುವಕರಿಗೆ ನ್ಯಾಯವಾದದ್ದು ಹಿರಿಯರಿಗೇನೋ ಅನ್ಯಾಯ ಅವರ ನ್ಯಾಯ ನಮಗನ್ಯಾಯ. ಎಲ್ಲಿಯವರೆಗೆ ಈ ಹಿರಿಯರ ಜಗಳವೋ ಕಾಣೆ. ಇರಲಿ, ನಾನು ಮಾಡುವುದು ಪರಹಿತಕ್ಕಾಗಿಯೇ. ರಮೆಯಂಥಾ ದುಃಖಪೀಡಿತ ಹುಡುಗಿಯರಿಗಾಗಿ ಇಷ್ಟನ್ನಾದರೂ ಮಾಡಲಯೋಗ್ಯನಾದ ಯುವಕನೂ ಗಂಡಸೇ ! ಆದರೂ......

[ಯೋಚಿಸುತ್ತಲಿರುತ್ತಾನೆ. ಅಲ್ಲಿಂದ ಮಾತಿಲ್ಲದೆ ಅಭಿನಯ ಮಾತ್ರದಿಂದ ಸ್ಥಿರಬುದ್ಧಿಯಿಲ್ಲದವನಂತೆ ಸ್ವಲ್ಪ ಹೊತ್ತಿದ್ದು ಕದಿಯಲಿಕ್ಕೆ ಹೋಗುತ್ತಾನೆ. ಶಿವರಾಯನು ಒಳಗೆ ಮಲಗಿರುತ್ತಾನೆ. ರಮೇಶನು ಸಂಕಲ್ಪವನ್ನು ಮಾಡಿಕೊಳ್ಳಬೇಕಾದರೆ ಎಷ್ಟೋ ಸಂಕೋಚಪಡುತ್ತಾನೆ, ಅನಂತರ ಮನಸ್ಸನ್ನು ಗಟ್ಟಿಮಾಡಿಕೊಂಡು ಒಳಗೆ ಪೆಟ್ಟಿಗೆಯ ಕಡೆಗೆ ಹೋಗುವಾಗ ತಂದೆಯು ಮಗ್ಗುಲನ್ನು ಸರಿಸುತ್ತಾನೆ. ಅದನ್ನು ಕಂಡು ಗಾಬರಿಯಾಗಿ ಮತ್ತೂ ಹಿಂಜರಿಯುತ್ತಾನೆ. ಮತ್ತೆ ಯೋಚನೆಮಾಡುತ್ತಾನೆ. ಕುಮುದೆಯು ಬಂದು ಸ್ಫೂರ್ತಿಗೊಳಿಸಲು ಯತ್ನಿಸುತ್ತಾಳೆ. ಉಪಯೋಗವಾಗಿಲ್ಲ. ಮುಂದೆ ನಿಂದಿಸುತ್ತಾಳೆ. ಈಗ ರಮೇಶನು ಹಾದಿಗೆ ಬಂದು ಪ್ರಯತ್ನದಲ್ಲಿರುತ್ತಾನೆ ]

ಕುಮುದ :—(ಒಂದು ಪಕ್ಕಕ್ಕೆ ಕರಕೊಂಡು ಹೋಗಿ)ನಾನೊಂದು ಉಪಾಯ ಮಾಡುತ್ತೇನೆ. ನಿನಗೆ ಅನುಕೂಲವಾಗುವುದು......

[ಅಲ್ಲಿರುವ ಮೇಜಿನಮೇಲಿರುವ ದೀಪವನ್ನು ಹಚ್ಚಿ ಒಂದು ಪುಸ್ತಕವನ್ನು ತೆರೆದಿಡುತ್ತಾಳೆ. ರಮೇಶನನ್ನು ಒಳಗೆ ಅವಿತುಕೊಳ್ಳುವಂತೆ ಮಾಡುತ್ತಾಳೆ. ತಾನು ಸ್ವಲ್ಪ ಹೊತ್ತು ಹಾಗೆಯೇ ಕೂತಮೇಲೆ ಗಟ್ಟಿಯಾಗಿ]

'ಹಾವಪ್ಪಾ ಹಾವು, ಹಾವು, – ಹಯ್ಯೋ, ಹಯ್ಯೋ, ಹಯ್ಯೋ " (ಎಂದು ಕೂಗುತ್ತಾಳೆ.)

[ಶಿವರಾಯನು ಎದ್ದು ಅವಳಿದ್ದೆಡೆಗೆ ಓಡಿಬರುತ್ತಾನೆ.]

" ಹ .. ಲ್ಲಿ ಹಾ .. ಚೆ ಕಡೆ ಓಡಿಹೋಯಿತು. " (ಎಂದು ಮುಂದುಗಡೆ ತೋರಿಸುತ್ತಾಳೆ. ಶಿವರಾಯನು ಅಲ್ಲಿಯೇ ಸುತ್ತಲೂ ನೋಡುತ್ತಿರುತ್ತಾನೆ.)

[ರಮೇಶನು ಒಳಗೆ ಹೋಗಿ ಆತನ ದಿಂಬಿನ ಕೆಳಗಿರುವ ಬೀಗದ ಕೈಯನ್ನು ತೆಗೆದುಕೊಂಡು ಕಬ್ಬಿಣದ ಪೆಟ್ಟಿಗೆಯಿಂದ ಕದಿಯುತ್ತಾನೆ.]

ಶಿವ:—(ಅಲ್ಲಿಂದ ಒಳಗೆ ಹೋದವನು ನಗುತ್ತಾ ಒಂದು ಹಗ್ಗವನ್ನು ಕೈಯಲ್ಲಿ ಹಿಡಿದುಕೊಂಡು ಬಂದು) ಹುಚ್ಚು ಮಗೂ, ಹಗ್ಗವಮ್ಮಾ ಅದು. ಸುಮ್ಮನೇ ಗಾಬರಿಯಾದೆಯಲ್ಲಾ (ಮೇಜಿನ ಮೇಲೆ ಇರುವ ಪುಸ್ತಕವನ್ನು ತೆಗೆದಿಟ್ಟುಕೊಂಡು) ಎಷ್ಟು ಹೊತ್ತು ಓದುವುದು ಈ ಹಾಳು ದೀಪದ ಮುಂದೆ ಕೂತು. ಓದಿ ಓದಿ ಕಣ್ಣು ಮಂದವಾಗಿ ಹಾಳಾಗುತ್ತದೆ. ಕುಮುದಾ, ಏನು ಹೇಳಲಿ, ಹೋಗು ಮಲಗು ಮಗೂ.

[ತೆರೆಯು ಬೀಳುತ್ತದೆ]

## ಅಂಕ ೩ ದೃಶ್ಯ ೨

[ಕೆಲವು ವಾರಗಳನಂತರ. ರಮಾರಮೇಶರ ಲಗ್ನವಾಗಿದೆ. ಮೋಹನ ಕುಮುದೆಯರಿಗೆ ಪರಮೋಲ್ಲಾಸ. ಇಬ್ಬರೂ ಬರುತ್ತಾರೆ]

ಮೋಹನ:—ಶುಭಮಂಗಳವನ್ನು ಮಾಡಿದ್ದಾಯಿತು.

ಕುಮುದ:—(ನಾಚುತ್ತ) ಅಷ್ಟಕ್ಕೇ ಮುಗಿಯಿತೇ ಎಲ್ಲವೂ.

ಮೋಹನ:—(ನಗುತ್ತ) ಅಲ್ಲ – ಮೊದಲನೆಯ ಪ್ರಕರಣ ಎಂದೆ. ಮಾಡಿದ ಕೆಲಸ ಕುವಿಚಾರವೋ ಸುವಿಚಾರವೋ ದೇವರೇ ಬಲ್ಲ.

ಕುಮುದ:—ಒಬ್ಬರ ಒಳ್ಳೆಯದಕ್ಕೆ ಅಲ್ಲವೇ ಮಾಡಿದ್ದು ? ಸ್ವಾರ್ಥಕ್ಕಲ್ಲವಲ್ಲ ?

ಮೋಹನ:—ಈ ಹಿರಿಯರೊಡನೆ ಜಗಳ ಕಾಯುವ ದುರ್ದೈವ ನನಗೇಕೆ ಬಂದಿದೆ, ಅನ್ನುತ್ತೇನೆ.

ಕುಮುದ:—ಅದು ಸಚೇತನ ಯೌವನದ ಲಕ್ಷಣ.

ಮೋಹನ:—ಹೇಗೂ ಇರಲಿ – ದೇವರೇನೋ ಮೆಚ್ಚದಿರನು ಎಂದು

ನನಗೆ ತೋರುತ್ತದೆ;—ಆದರೆ ನಿಮ್ಮ ತಂದೆಗೆ ಅವಮಾನ ಪಡಿಸಿದ ಪಾಪ—

ಕುಮುದ :—ಛೀ ಛೀ - ಧರ್ಮದ ಹೆಸರಿನಿಂದ ಅಧರ್ಮವನ್ನೇ ಮಾಡು ತ್ತಿರುವವನಿಗೆ ತಂದೆಯೆನಿಸಿಕೊಳ್ಳುವ ಹಕ್ಕಾದರೂ ಹೇಗೆ ಎಲ್ಲಿಂದ ಬರಬೇಕು ?

ಮೋಹನ :—ಈ...ಗ ಮನಸ್ಸಿಗೆ ಶಾಂತಿಯಾಯಿತು. ಗಂಡಸರಿಗೆ ಹೆಂಗಸರಿಂದ ಸ್ಫೂರ್ತಿಯಿಲ್ಲವಾದರೆ, ಕಡೆಗೆ ಸಮ್ಮತಿಯಾದರೂ ದೊರಕುವುದಿಲ್ಲವಾದರೆ, ಉತ್ತಮಕಾರ್ಯಗಳಾಗುವುದು ಅಸಾಧ್ಯವೇ.

ಕುಮುದ :—ಹಾಗೆಯೇ ಹೆಂಗಸರಿಗೂ. ಲಿಂಗಭೇಧವೇ ಪರಸ್ಪರ ಸ್ಫೂರ್ತಿ ಗಾಗಿ ಹುಟ್ಟಿರಬೇಕು ಎಂದು ತೋರುತ್ತದೆ.

ಮೋಹನ :—ಎಂತಹ ಮಾತು ! ಎಂತಹ ಅದ್ಭುತ ವಾಕ್ಯವನ್ನು ಹೇಳಿ ದಿರಿ.

ಕುಮುದ :—ಅದೂ ಆ ಸ್ಫೂರ್ತಿಯ ನಿದರ್ಶನವೇ.

ಮೋಹನ :—ನಾನಂತೂ ಸಮಾಜದ ಹಿಂಸಾಪರವಾದ ಹಾಳು ರೂಢಿ ಯನ್ನು ಮೆಟ್ಟಿ ಸುಟ್ಟು ಹಾಳುಮಾಡುವುದೇ ಸದ್ಯದ ಧರ್ಮ ಎಂದು ತಿಳಿದುಕೊಂಡಿದ್ದೇನೆ. ಅದರಿಂದ ನನಗೆ ನರಕ ಪ್ರಾಪ್ತಿಯಾದರೂ ತಯ್ಯಾರು ನಾನು ಅದಕ್ಕೆ.

ಕುಮುದ :—ಆದರೆ ದುರ್ಭಾಗ್ಯರಿಗೆ ಇಲ್ಲಿಯೇ ಸ್ವರ್ಗವನ್ನು ಮಾಡಿಕೊಡು ತ್ತೀರಷ್ಟೆ.

ಮೋಹನ :—ನಿಸ್ಸತ್ವ, ನಿಸ್ಸಾರ, ರೂಢಿಗೆ ವಿರುದ್ಧವಾದ ಕರ್ಮಗಳ ವಿಮಾನದಲ್ಲಿ ಕೂತು ನಾನು ನರಕಕ್ಕೆ ಹೋಗುವಾಗ ಕೆಲವು ಸ್ವರ್ಗ ಪ್ರಿಯ ಹೇಡಿಗಳನ್ನಾದರೂ ಸ್ವರ್ಗಕ್ಕೆ ಮುಟ್ಟಿಸುತ್ತೇನೆ. ನರಕ! ನರ ಕವಂತೆ! ಅದನ್ನು ನೋಡಲಿಕ್ಕೆ ಬೇರೆಲ್ಲಿಯಾದರೂ ಹೋಗಬೇಕೇ.

ನಾವು ಹಿಂದುಗಳು ಹೆಂಗಸರಿಗೂ ಪಂಚಮರಿಗೂ ಮಾಡಿಟ್ಟಂಥಾ ಇನ್ನೊಂದು ನರಕವನ್ನು ರಚಿಸುವುದು ಆ- ಆ ದೇವರಿಗಾದರೂ ಸಾಧ್ಯವೋ ? ಅಂತಹ ನರಕವಿದೆಯೋ ಎಲ್ಲಿಯಾದರೂ ?

ಕುಮುದ :—ಅಂತಹದಿದ್ದರೂ ಏನಾಯಿತು ಸುಧಾರಕರಿಗೆ—

ಮೋಹನ :—ಅದೂ ಒಂದು ಸುಧಾರಿಸತಕ್ಕ ಜಾಗೆಯೇ.

[ಇಬ್ಬರೂ ಹೋಗುವರು]

**ಅಂಕ ೩ ದೃಶ್ಯ ೩**

[ಶಿವರಾಯನ ಮನೆಯ ದಿವಾನಖಾನೆ. ಶಿವರಾವ್ ಮತ್ತು ಸುಬ್ಬಣ್ಣಾಚಾರ್ಯ]

ಶಿವರಾಯ :—ಆಯಿತೊಂದು ಲಗ್ನದ ಕೆಲಸ. ಆದರೆ ಸ್ವಲ್ಪ ತಮಾಷೆಯಾಗಿದ್ದಿದ್ದರೆ ಚೆನ್ನಾಗಿತ್ತು. ಡಾಕ್ಟರವರು ಲಗ್ನಕ್ಕೊಪ್ಪಿಕೊಂಡಿದ್ದಿದ್ದರೆ ಈಗಲೇ ಎರಡು ಲಗ್ನಗಳ ಖರ್ಚು ಶಾಸ್ತ್ರಿಗಳ ತಲೆಯ ಮೇಲೆ ಹಾಕಿ ಬೇಷಾಗಿ ನೋಡುತ್ತಿದ್ದೆ.

ಸುಬ್ಬ :—ಆದರೂ ಏನೂ ಪರವಾಯಿಲ್ಲ. ಆದದ್ದು ಒಳ್ಳೇದೇ ಆಯಿತು. ಹತ್ತು ಮುಂದಿ ಅನುಕರಿಸತಕ್ಕ ಕೆಲಸ.

ಶಿವರಾಯ :—ಅದೇನು ?

ಸುಬ್ಬ :—ನೀವು ಆಡಿದ್ದನ್ನು ಮಾಡಿಯೂ ತೋರಿಸಿದಿರಿ. ತಮ್ಮ ಹುಡುಗನಿಗಾಗಿ ಎಷ್ಟು ದುಡ್ಡು ತಕ್ಕೊಂಡರೂ ನ್ಯಾಯವೇ ಆಗಿರುತ್ತಿತ್ತಾದರೂ, ನಮ್ಮ ರಾಯರು ಬಡವರಿಗಾಗಿ ಪುಣ್ಯದ ಲಗ್ನ ಮಾಡಿ ಔದಾರ್ಯವನ್ನು ತೋರಿಸಿದರು—ಎಂದು ಹೊಗಳುತ್ತಾ ಇರುತ್ತೇನೆ ನಾನು.

ಶಿವರಾಯ :—ಬುದ್ಧಿವಂತರು ನೀವು.

ಸುಬ್ಬ :—ಏನು ಮಾತಿದು ! ನಿಮ್ಮ ಗುಣಗಳಲ್ಲಿ ಸ್ವಲ್ಪವಾದರೂ ಯಾರಿಗೇ ಆಗಲಿ ಬಾರದುಬಿಟ್ಟರೆ ಮುಂದೆ ಅಂಥವನ ಉದ್ಧಾರ ಹೇಳಬೇಕೇ ?

ಆದರೆ ದೈವ ಬೇಕಲ್ಲವೆ ಇತರರಿಗೆ ಇಂತಹ ಸಹವಾಸ ದೊರೆಯ ಲಿಕ್ಕೆ ?

[ಗುಂಡೂರಾಯರ ಪ್ರವೇಶ]

ಶಿವರಾಯ :—ಯಾರು...ಡಾಕ್ಟರ್-- ಗುಂಡೂರಾವ್ -- ಬನ್ನಿ -- ಕೂತು ಕೊಳ್ಳಿ...ಏನು ಬಂದಿರಿ ?

ಗುಂಡೂ :—ಏನಿಲ್ಲ. ರಮೇಶನ ಲಗ್ನವಾಯಿತು. ಹೀಗೇ...ತಮ್ಮ ದರ್ಶನಮಾಡಿಕೊಳ್ಳೋಣ ಎಂದು ಬಂದೆ.

ಶಿವರಾಯ :—ಹಂ - ಬದುಕಿದೆ - ಆಯಿತು - ಕೆಲಸ ಒಂದು.

ಸುಬ್ಬ :—ಬಹಳ ಶಾಸ್ತ್ರೋಕ್ತವಾಗಿಯೇ ಆಯಿತು ಲಗ್ನ, ಡಾಕ್ಟರರೇ - ಅಟ್ಟಹಾಸ, ಆಡಂಬರ, ಬಾಣಬಿರಸು, ಒಂದೂ ಇಲ್ಲ. ವೇದೋಕ್ತ ಲಗ್ನವೆಂದು ಹೇಳಬೇಕು ನೋಡಿ.

ಶಿವ :—ಆಡಿದಂತೆಯೇ ಮಾಡಬೇಕು. ಇಷ್ಟೇ ನನ್ನ ಜೀವನಸೂತ್ರ ನೋಡಿ.

ಗುಂಡೂ :—ಬಹು ಯೋಗ್ಯ.

ಸುಬ್ಬ :—ಈ ಮದುವೆಯಲ್ಲಿ ವ್ಯರ್ಥವಾಗಿ ಖರ್ಚುಮಾಡದೆ ಉಳಿದ ಹಣ ದಿಂದ ಬಡಬಗ್ಗರ ಆರೈಕೆಮಾಡಬೇಕೆಂದು ರಾಯರ ಇಚ್ಛೆ.

ಗುಂಡೂ :— ಯಾಕೆ ? ವರದಕ್ಷಿಣೆಯ ದುಡ್ಡು ಒರಲಿಲ್ಲವೇನು ?

ಶಿವ :—ಓ.

ಗುಂಡೂ :—ಗಂಟೋ ? ನೋಟೋ ?

ಶಿವ :— ನೋಟು, ಯಾಕೆ ?

ಗುಂಡೂ :—ಹೀಗೆಯೇ. ನೋಟೇನೂ ಬನಾವಟಿಯಲ್ಲವಲ್ಲ ?

ಸುಬ್ಬ :—ಮತ್ತೆ ಹೀಗೇಕೆ ಕೇಳಿದಿರಿ ?

ಶಿವ :—ಏನಾದರೂ ವಿಶೇಷವಿಲ್ಲವಷ್ಟೇ ?

ಗುಂಡೂ :—ಹಾಗೇನೂ ಇಲ್ಲ. ಆದರೂ...ಹಾಗೆಯೇ ಇರಬಹುದು ಎನ್ನಲಿಕ್ಕೂ ಅಡ್ಡಿ ಇಲ್ಲ.

ಶಿವ :—ಏನು ಕಳ್ಳತನವೋ ? ಇಬ್ಬರೂ ಕೂಡಿ ಎಲ್ಲಿಯಾದರೂ ದರೋಡೆ ಹಾಕಿದರೇನು ?

ಗುಂಡೂ :—ನೀವು ಆ ನೋಟುಗಳನ್ನು ಸ್ವಲ್ಪ ಪರೀಕ್ಷೆಮಾಡಿ ನೋಡಿದ್ದೀರೋ ?

ಸುಬ್ಬ :—ನೋಟಿನಂತೆಯೇ ನೋಟು. ಅದರಲ್ಲಿ ಗುರುತೇನು ?

ಗುಂಡೂ :—ನಿಮ್ಮ ಮನೆಯ ನೋಟುಗಳೇ ಇರಬಹುದು. ನಂಬರ್ ನೀವು ಬರೆದಿಟ್ಟಿರಬಹುದಷ್ಟೆ ?

ಶಿವ :—ನಿಲ್ಲಿ, ನೋಡಿಬರುತ್ತೇನೊಮ್ಮೆ.

ಗುಂಡೂ :—(ಸ್ವ) ಇದೇ ಹೊತ್ತು ಬುದ್ಧಿ ಕಲಿಸಕ್ಕೆ ಈ ಪಾಪಿಗಳಿಗೆ. ದೇವಸ್ಥಾನಕ್ಕೆ ಹೋದುದಕ್ಕೆ ಇಷ್ಟೊಂದು ಲಾಭವಾದರೂ ಆಯಿತು. ಆ ಇಬ್ಬರು ಹುಡುಗಿಯರ ಮಾತು ಕೇಳಿಬಂತು. ಇದಕ್ಕೇ ದೇವರ ದರ್ಶನದಿಂದ ನಿಜವಾದ ಭಕ್ತರಿಗೆ ಊಹಿಸಲಾರದ ಫಲ ಪ್ರಾಪ್ತಿಯಾಗುತ್ತದೆ ಎಂದು ಹಿರಿಯರು ಹೇಳುವುದು...ಉಂ...ನನಗವಮಾನ ಮಾಡಿದ್ದಕ್ಕೆ ತಕ್ಕ ಪ್ರತಿಕಾರ ಮಾಡಿಯೇ ಬಿಡುತ್ತೇನೀಗ.

ಸುಬ್ಬ :—ಏನದು ? ಪೆಟ್ಟಿಗೆಯೊಳಗಿಂದ ಕದ್ದವರ್ಯಾರು ?

ಶಿವ :—(ನೋಟು ಡಾಯರಿಗಳನ್ನು ತಕ್ಕೊಂಡು ಬರುತ್ತಾನೆ) ಮುಣುಗಿತು ! ಎಲ್ಲಾ ಮುಣುಗಿತು !! ಈ ನಂಬರುಗಳೆರಡೂ ಹೋಲಿಸಿ ನೋಡಿ ! ಎರಡೂ ಒಂದೇ !

ಗುಂಡೂ :—ಅದನ್ನು ಹೇಳುವುದಕ್ಕೇ ನಾನೂ ಬಂದಿದ್ದೇನೆ. ನಾನೂ ಮಾಮೂಲು ಪ್ರಕಾರ ಮುಂಜಾನೆ ರಾಮದರ್ಶನಕ್ಕೆ ಹೋಗಿದ್ದೆ.

ಸುಬ್ಬ :—ಆಹಹಾಹಾ...ನೀವು ಎಷ್ಟು ಓದಿಕೊಂಡಿದ್ದರೂ ದೇವರಲ್ಲಿ ಭಕ್ತಿ ಇಟ್ಟುಕೊಂಡು.........

ಶಿವ :—ಬಾಯಿಮುಚ್ಚಿ. ಮೊದ್ದು - ಮೊದ್ದು ತಲೆ ! ಮಧ್ಯದಲ್ಲಿ ಮಾತಾಡ ಬೇಡಿ ಅಂದರೆ.

ಗುಂಡೂ :—ದೇವಸ್ಥಾನದಲ್ಲಿ ಇಬ್ಬರು ಹುಡುಗಿಯರು ಮಾತನಾಡಿ ನಗು ತ್ತಿದ್ದರು. ಹುಡುಗನೇ ನೋಟು ಕದ್ದು ಕೊಟ್ಟನಂತೆ.

ಶಿವ :—(ಕ್ರೋಧದಿಂದ ಗಟ್ಟಿಯಾಗಿ) ಎಲಾ ಖೂಳಾ, ಕಳ್ಳಾ (ಗುಂಡು ಬೆದರುತ್ತಾನೆ)

ಸುಬ್ಬ :—ನಿಮಗಲ್ಲ ಇದು ಡಾಕ್ಟರ್.

ಶಿವ :—ಮನೆ ಮುಣಗಿಸಿದೆಯೊ ಮಗನೇ !

ಗುಂಡೂ :—ಬರುತ್ತೇನೆ, ನಮಸ್ಕಾರ ! ಈಗ ನಿಮಗೆ ಸ್ವಲ್ಪ ವಿಶ್ರಾಂತಿ ಬೇಕು (ಆಚಾರ್ಯನಿಗೆ) ಹಚ್ಚಿದೆ ಕಡ್ಡಿ, ಅಡ್ಡಿ ಇಲ್ಲದೆ ಈಗ ಹೋಮ ನಡೆಯುತ್ತದೆ.

ಶಿವ :—ನಮಸ್ಕಾರ - ಈಗ ಹುಡುಗನನ್ನು ಪೊಲೀಸಿಗೆ ಕೊಟ್ಟುಬಿಡಬೇಕು. ನಮ್ಮವನು ಎಂದ:ದನ್ನು ಈಗ ಮರೆತೇ ಬಿಡಬೇಕು.

ಸುಬ್ಬ :—ಆದರೆ ಇದರಿಂದಾಗುವುದೇನು ? ಕುಲಕ್ಕಪಕೀರ್ತಿ, ಮಗನಿಗೆ ತೊಂದರೆ, ಯಾಕಿದೆಲ್ಲಾ.

ಶಿವ :—ಏನುಮಾಡಲಿ ಇವನಿಗೆ ? - ದುಡ್ಡು ಹೋಯಿತು - ಹೋಗಲಿ. ನನ್ನ ಮಾನಕ್ಕೂ ಕಲಂಕ ಹಚ್ಚಿದನಲ್ಲಾ - ಈ ಪಾಪಿ - ಏನು ಮಾಡಲಿ ?

ಸುಬ್ಬ :—ಏನು ಮಾಡಬೇಕು!

ಶಿವ :—ಏನು ಮಾಡಲಿ !

ಸುಬ್ಬ :—ಹೆಂಡತಿಯು ಸಹಿತವಾಗಿ ಮನೆಯಿಂದ ಹೊರಕ್ಕೆ ತಳ್ಳಿಬಿಡಬೇಕು. ಮಾಡಲಿ ಸೊಕ್ಕಿನ ಸಂಸಾರ.

ಶಿವ :—ಠಕ್ಕಿನ ಮದುವೆ– ಸೊಕ್ಕಿನ ಸಂಸಾರ– ಬಿಕ್ಕು ಬಿಕ್ಕಿನ ಜೀವವೇ ಗತಿ ಮುಂದೆ – ನಿನಗೆ ಪಾಪಿ – ಹಾಗೆಯೇ ಮಾಡಬೇಕು. ಆಚಾರ್ಯರೇ–ಅವನ ಕಿವಿ ಹಿಂಡಬೇಕು.––ಅಷ್ಟು ಮಾಡದೆ ನನಗೆ ಶಾಂತಿ ಇಲ್ಲ. ಕಿವಿ ಹಿಂಡಬೇಕು (ಸುಬ್ಬಣ್ಣಾಚಾರ್ಯರ ಕಡೆಗೆ ಹೋಗುವನು)

ಸುಬ್ಬ :—ನಾನು, ನಾನು, ಸ್ವಾಮಿ ನಾನು ರಾಯರೇ ನಾನು, ನಾನು.

[ಮೋಹನ ರಮೇಶರ ಪ್ರವೇಶ]

ಶಿವ :—(ರಮೇಶನಿಗೆ) ನೀಚಾ––ಹರಾಮಾ––(ಮೋಹನನನ್ನು ನೋಡಿ) ಇದ್ಯಾರು ? ಡಾಕ್ಟರ್. ನನ್ನ ಮುಂದಿನ ಅಳಿಯರಾಯರು. ನನ್ನ ಕಣ್ಣಿಗೇ ಮಣ್ಣು ಹಾಕಿದಿರೋ !

ಮೋಹನ :—ಏನಾಯಿತು ?

ಶಿವ :—ಏನಾಯಿತೋ ? ಇಬ್ಬರನ್ನೂ ಪೊಲೀಸರ ಕೈಯಲ್ಲಿ ಕೊಟ್ಟರೆ ತಿಳಿಯುವುದೀಗಲೇ. (ರಮೇಶನಿಗೆ) ಹರಾಮು – ನೀನು ಈಗಲೇ ನಿನ್ನ ಹೆಂಡತಿಯನ್ನು ಕರೆದುಕೊಂಡು ಹೋಗು. ದೇವರು ನನಗೆ ಒಳ್ಳೇ ಜಾಗ್ರತೆಯಿಂದಿಟ್ಟನು. ನಾನೇನಾದರೂ ನಾಲ್ಕು ಒಡವೆಗಳನ್ನು ಹಾಕಿದ್ದಿದ್ದರೆ ಈಗ ಕಸಕೊಳ್ಳಬೇಕಾಗುತ್ತಿತ್ತು.

ರಮೇಶ :—ಏನುಮಾಡಿದೆ ನಾನು ?

ಶಿವ :—ನನ್ನ ಪೆಟ್ಟಿಗೆಗೆ ಕನ್ನಹಾಕಿ ಮೇಲೆ ಹಾಗೆ ಕೇಳಲಿಕ್ಕೆ ನಾಚಿಕೆಯಾದರೂ ಆಗುವುದಿಲ್ಲವೇ ನಿನಗೆ ?

ಮೋಹನ :—ಏನು ನಿಮ್ಮ ಮಗ ಕನ್ನಹಾಕಿದನೋ – ಅದೂ ನಿಮ್ಮ ಪೆಟ್ಟಿಗೆಗೆ – ಛೆ – ಛೆ !

ಶಿವ :—ನೀವೂ ಸೇರಿಯೇ ಇದ್ದೀರಿ. ಹೆಂಡತಿಗಾಗಿ ತಾಯಿಯನ್ನು ಸೀಳಿ ತಿಂದಾರು – ಎಂದು ಹಿರಿಯರು ಹೇಳುವುದು ತಪ್ಪೋ ಈ ದೃಷ್ಟಾಂತ ನೋಡಿದರೆ. (ನೋಟ್ ಮತ್ತು ಡಾಯರಿ ತೋರಿಸುತ್ತಾನೆ.)

ಮೋಹನ :—ಎರಡೂ ಒಂದೇ, ಆದರೆ ಇದಕ್ಕೂ ರಮೇಶನಿಗೂ ಏನು ಸಂಬಂಧ ? ಏನು ವಿಶೇಷ ?

ಶಿವ :—(ಸಿಟ್ಟಿನಿಂದ) ಆಂ... ಮಾಡುತ್ತೇನೀಗ

ಮೋಹನ :—ಮುಂದಿನ ಉಪಾಯ ಮಾಡಬೇಕೀಗ (ಶಿವರಾಯನಿಗೆ) ಸ್ವಲ್ಪ–

ಶಿವ :—ಏನನ್ನಬೇಕು ಡಾಕ್ಟರ್—ನನಗೆ ಅಪಕೀರ್ತಿ ಬಂದೀತೆಂದು ಸುಮ್ಮನಿರಬೇಕಾಗಿದೆ. ಇಲ್ಲವಾದರೆ ಜೈಲಿನ ಹಾದಿ ತೋರಿಸಿಯೇ ಬಿಡುತ್ತಿದ್ದೆ.

ಮೋಹನ :—ಎಷ್ಟೆಂದರೂ ನಿಮ್ಮದೇ ರಕ್ತ. ಆಗುತ್ತದೆ ಹಾಗೆಲ್ಲಿಯಾದರೂ ಒಮ್ಮೊಮ್ಮೆ ತಪ್ಪು...... ಪ್ರಪಂಚ.

ಶಿವ :—ಎಂಥಾ ತಪ್ಪಿದು ! ಕ್ರಿಮಿನಲ್ ಅಫೆನ್ಸ್* ! ಮನೆ ಮುಳುಗಿಸಿಬಿಟ್ಟನಲ್ಲಾ (ರಮೇಶನಿಗೆ) ಎಲೋ ಈಗೇನೋ ಬಾಯಿಮುಚ್ಚಿ ಕೂತಿದ್ದೀ. ಬೊಗಳೋ, ಬೊಗಳೋ,

ರಮೇಶ :—ಅಪ್ಪಾ... ವರದಕ್ಷಿಣೆಯ ಹಟ ನೀನು ಹಿಡಿದಿದ್ದಿಲ್ಲವಾದರೆ ಈ ಗಲಾಟೆಯೇ ಆಗುತ್ತಿದ್ದಿಲ್ಲ. ದೊಡ್ಡವರ ಕಾಟವೇ ಚಿಕ್ಕವರಿಂದೀ ಆಟವನ್ನು ಮಾಡಿಸುವುದು, ಆದರೆ ಅದರ ಪಾಠ ನಮ್ಮ ಜನರ ತಲೆಗಿನ್ನೂ......

* Criminal offence

ಶಿವ :—ಮಾತಾಡಬೇಡ--ನನ್ನ ಮೈಯೆಲ್ಲಾ ಬೆಂಕಿ ಬೆಂಕಿಯಾಗಿಬಿಡುತ್ತಾ ಇದೆ. ಬಾಯಿ ಬಿಟ್ಟೆ ಅಂದರೆ– ನಡಿ ಮನೆಬಿಟ್ಟು...

ರಮಾ :—(ಪ್ರವೇಶ) ನನ್ನ ಕಡೆ ನೋಡಿಯಾದರೂ ಇಷ್ಟೊಂದು ಮಾಡ ಬಾರದು (ನಮಸ್ಕರಿಸುತ್ತ)

ಶಿವ :—ನಿನ್ನನ್ನು ನೋಡಿ ತಣ್ಣಗಾಗಬೇಕೂ? ಇವನು ನಾಲ್ಕು ಸಾವಿರಕ್ಕೆ ಪಟುಹಾಕಿ ಬಿಟ್ಟದ್ದು ಸಾಲದೇ? ತಣ್ಣಗಾಗಲಿಕ್ಕೆ ನೀನೂ–ನಡುವೆ-

[ಶಾಸ್ತ್ರಿಗಳ ಪ್ರವೇಶ]

ಮೋಹನ :—(ಸ್ವ) ಎಲಾ ಎಲಾ ಘಾತವಾಯಿತು. ಮಾವನವರ ಸವಾರಿ ಬಂತು.

ನೀಲ :—(ಶಿವರಾಯರನ್ನು ನಮಸ್ಕರಿಸಿ) ಇದು ನನ್ನ ತಪ್ಪು. ಅವರನ್ನು ಕ್ಷಮಿಸಿ. ನನ್ನನ್ನೇ ಪೊಲೀಸರ ಕೈಗೆ ಕೊಟ್ಟುಬಿಡಿ. ಅವರ ಮೇಲೆ ಸಿಟ್ಟು ಬೇಡ.

ಶಿವ :—ಹೊರಡೋ. ಮೋರೆ ತೋರಿಸಬೇಡ. ಇನ್ನೇನು ಪಾಪ ಮಾಡುತ್ತಿಯೋ? (ಮಗ ಸೊಸೆಯರಿಗೆ) ಹೊರಡಿ.

ನೀಲ :—ನನ್ನ ತಪ್ಪಿಗೆ ಅವರಿಗೇಕೆ ದಂಡನೆ?

ಶಿವ :—ಏನು ಮಾಡಲಿ– ಎಲ್ಲರೂ ಸೇರಿಕೊಂಡು ಬಿಟ್ಟಿದ್ದಾರಲ್ಲಾ. ಕೊಡ ಲೇನು ಎಲ್ಲರನ್ನೂ ಪೊಲೀಸಿನವರಿಗೆ?... ಆದರೆ –

ಮೋಹನ :—ರಾಯರೇ, ಸ್ವಲ್ಪ ವಿಚಾರ ಮಾಡಿ ನೋಡಿ. ಕೆಲಸ ಕಳ್ಳತನ ದ್ದಾಗಿದ್ದರೂ ವಿಚಾರಕ್ಕೆ ನಿಜವಾಗಿದು ಕಳ್ಳತನವಲ್ಲ. ಯಾಕೆಂದರೆ ನಿಮ್ಮ ಸ್ವತ್ತೇನು ಪ್ರತ್ಯಕ್ಷವಾಗಿ ಹೋಗಲಿಲ್ಲವಲ್ಲಾ ?

ಶಿವ :—ಏನು ? ಪ್ರತ್ಯಕ್ಷ ನಷ್ಟವಾಗಿಲ್ಲವೋ ನನಗೆ? ನಾಲ್ಕು ಸಾವಿರ ರೂಪಾಯಿ ಬರುವುದು ಮುಳುಗಿತು. ನಷ್ಟವಲ್ಲವೇ ಅದು ?

ಮೋಹನ :—ರಮೇಶನಿಗೆ ವಿಲಾಯತಿಗೆ ಕಳಿಸಬೇಕಂದಲ್ಲವೆ ಆ ಗಂಟು ಬೇಕೆಂದದ್ದು ನೀವು ? ಈಗವನನ್ನು ಕಳಿಸಬೇಡಿ. ತೀರಿಹೋಯಿತು.

ಶಿವ :—(ಸ್ವ) ಕಡೆಗೆ ನನ್ನ ಕಾಲಿಗೇ ಬಂತೋ ಕೊಡಲಿ ! (ಮೋಹನನಿಗೆ) ಡಾಕ್ಟರ್, ನೀವು ಹೇಳುತ್ತೀರೆಂದು ಇವರನ್ನೆಲ್ಲಾ ಬಿಟ್ಟುಬಿಡುತ್ತೇನೆ. ಆದರೆ (ಮಗನಿಗೆ) ನೀನೂ ನಿನ್ನ ಹೆಂಡತಿಯೂ ಒಂದು ಕಡ್ಡಿ ಸಹ ಮುಟ್ಟದೆ ಈ ಕ್ಷಣವೇ ಇಲ್ಲಿಂದ ಹೊರಟು ಹೋಗಬೇಕು.

ರಮೇಶ :—ನಡೆ- ರಮಾ - ಜಾಭದ ಜೀವನದಿಂದ ಮುಕ್ತಿ ! ದೇವರೇ ನನ್ನ ಪ್ರಾರ್ಥನೆ ಕೇಳಿಬಿಟ್ಟನು (ನಮಸ್ಕರಿಸಿ ಹೋಗುತ್ತಾರೆ)

ಶಿವ :—ಎಷ್ಟು ಸೊಕ್ಕು ಇವನಿಗೆ ! ತಾಯಿ ಇಲ್ಲದ ಮಗನೆಂದು ಇವನನ್ನು ನೋಡಿದರೆ ಹೀಗೆ ಸೊಕ್ಕಿಬಿಟ್ಟನೋ ಇವನು ! ಹೊರಟನಲ್ಲಾ ! ಈಗ ನನ್ನ ಆಸ್ತಿಯನ್ನೆಲ್ಲಾ ಒಂದು ದುಡ್ಡಿನ ಗಂಟುಮಾಡಿ ಬ್ಯಾಂಕಿ * ನಲ್ಲಿಟ್ಟು ಬಿಟ್ಟು ನನ್ನ ನಂತರ ನನಗೆ ಬೇಕಾದವರಿಗೆ ಅದು ಹೋಗ ಬೇಕಾಗಿ ವಿಲ್ ‡ ಮಾಡಿ ಬಿಡುತ್ತೇನೆ. (ಮಗನ ಕಡೆ ನೋಡಿ) ಹೋಗು - ಹಾಳಾಗು - (ಶಾಸ್ತ್ರಿಗೆ) ನಡೆಯಿರಿ. ಈ ಕಪ್ಪು ಮೋರೆ ಇನ್ನು ಮುಂದೆ ತೋರಿಸಬೇಡಿ.

ನೀಲ :—(ಮೋಹನನಿಗೆ) ಏನು ಮಾಡಿದೆಯೋ ಇದು. ಗುಂಡೂರಾಯರು ಬಂದು ಹೇಳಿದರೆಂದು ನನಗಿದು ತಿಳಿಯಿತು ಆ ಕೂಡಲೇ ಇಲ್ಲಿಗೆ ಬಂದೆ. ಎಂತಹ ಅವಿವೇಕ ಮಾಡಿದೆಯೋ ಹುಡುಗಾ !

ಮೋಹನ :—(ನಮಸ್ಕರಿಸಿ) ಮಾವಾ, ಕ್ಷಮಿಸು. ತಪ್ಪು ನನ್ನದೇ, ಆದರೆ ಅಪಕೀರ್ತಿಯು ನಿನಗೆ ಬಂತು...ಆದರೂ ಅದರ ಮುಂದಿನ ಪರಿಣಾಮವನ್ನು ನೋಡಬೇಕು. ಅವರಿಬ್ಬರೂ ಸುಖದಿಂದಿರುವಂತಿದ್ದರೆ, ಸ್ವಲ್ಪ ಅಪಕೀರ್ತಿಯು ಬಂದರೂ ಏನು ಮಾವಾ ಅದರಲ್ಲಿ? ರೂಢಿಪೀಡಿತರಿಗೆ ಸ್ವರ್ಗದ ಹಾಡನ್ನು ಕೇಳಿಸುವುದಕ್ಕಾಗಿ

---

* Bank ‡ Will

ತಾವು ನರಕದ ಬೆಂಕಿಯಲ್ಲಿ ನಲಿದಾಡಬೇಕು. ಅಂಥವರೇ ಅಲ್ಲವೆ ಧರ್ಮಾತ್ಮರು ! ಬಾಕಿ ಎಲ್ಲರೂ ಧರ್ಮಭೀರುಗಳು. ಇನ್ನು ಮುಂದೆ (ಆಲೋಚಿಸುತ್ತಾನೆ)

[ಕೇಳಲಿಚ್ಛಿಸದೆ ಶಾಸ್ತ್ರಿಯು ಹೋಗುತ್ತಾನೆ]

ಹೀಗೆಯೇ ಹಿಂಸಾತ್ಮರನ್ನು ಧರ್ಮಾತ್ಮರನ್ನಾಗಿ ಮಾಡಿದರೆಯೇ ನಾನು ಹಿಂದೂ ಜನ್ಮವನ್ನೆತ್ತಿದ್ದಕ್ಕೆ ಸಾರ್ಥಕ.

[ಪರದೆಯು ಬೀಳುತ್ತದೆ.]

## ಅಂಕ ೩. ದೃಶ್ಯ ೪.

### ಬೀದಿ

ಗುಂಡೂ :—(ಸ್ವ) ಏನೋ ಮಾಡಲಿಕ್ಕೆ ಹೋದರೆ ಏನೋ ಆಯಿತು. ಆದರೂ ಚಿಂತೆ ಯಾಕೆ. ತಂಗಿಗಾದ ಶಿಕ್ಷೆ ಅಣ್ಣನಿಗೆ ಆದಂತೆಯೇ ಅಲ್ಲವೇ ? ಮೋಹನನ ಫಜೀತಿಯು ಆಗಿಯೇ ತೀರಬೇಕು. ಕುಮುದೆಯ ಮೇಲೆ ಅವನ ಮನಸ್ಸು ಇದೆಯಂತೆ. ಲಗ್ನವೂ ಆಗುವಂತಿದೆ. ಅವರಿಬ್ಬರೂ ಮಾಡಿದ ಚೇಷ್ಟೆಗೆ ಅವರ ಸೊಕ್ಕು ಮುರಿಯಬೇಕೀಗ. ಅವಳನ್ನು ನನಗೆ ಕೊಟ್ಟು ಲಗ್ನಮಾಡಿ ಎಂದು ಕೇಳಿಕೊಳ್ಳುತ್ತೇನೆ. ಲಗ್ನವಾಯಿತು ಅಂದರೆ ಅವಳನ್ನು ಹಾದಿಗೆ ತರುವುದು ನನ್ನ ಕೈಯಲ್ಲಿದೆ. ಅವಳು ನನ್ನ ಹೆಂಡತಿಯಾದರೆ ಸಾಕು – ಮೋಹನನಿಗೆ ಅದೇ ಶಿಕ್ಷೆ. ಜೀವಂತ ಮರಣವೇ ಅವನಿಗದು.

[ಆಚಾರ್ಯನ ಪ್ರವೇಶ]

ಏನಯ್ಯಾ ಮುಂದೇನಾಯಿತು ?

ಸುಬ್ಬ :—ಆಗುವುದೇನು ? ಯಜಮಾನರು ಎಲ್ಲಾ ಆಸ್ತಿಯನ್ನೂ ಗಂಟು ಮಾಡಿ ಬ್ಯಾಂಕಿನಲ್ಲಿ ಇಟ್ಟು ಬಿಟ್ಟು ಮಗನಿಗೆ ಸಿಗದಹಾಗೆ ವ್ಯವಸ್ಥೆ ಮಾಡಿದ್ದಾರೆ. ಅಂಥಾ -- ಆ – ನೀಚರಿಗೆ ತಕ್ಕ ಶಿಕ್ಷೆಯಾಗಲೇ ಬೇಕು.

ಗುಂಡೂ :— ಬೆಂಕ್‌ನಲ್ಲಿಟ್ಟ ಮಾತ್ರಕ್ಕೇನಾಯಿತು ? ನಾಳೆಯಾದರೂ ಸಿಗು ವದಿಲ್ಲವೆ ಅವನಿಗೆ ?

ಸುಬ್ಬ :— ಛೆ, ಛೆ, ಅದೆಲ್ಲಾ ಎಲ್ಲಿಯೋ ಧರ್ಮಕ್ಕಾಗಿ ಹೋಗಬೇಕೆಂದು ಯಜಮಾನರ ಏರ್ಪಾಡು.

ಗುಂಡೂ :— ಆಸ್ತಿಯನ್ನೆಲ್ಲಾ ಮಗಳಿಗೇಕೆ ಕೊಡಬಾರದು ?

ಸುಬ್ಬ :— ಅವಳಿಗೆ ಅಣ್ಣ ಎಂದರೆ ಪ್ರಾಣ, ಅವನಿಗೆ ಕೊಟ್ಟು ಬಿಟ್ಟಾಳು ಎಲ್ಲಿಯಾದರೂ. ಅವಳಿಗೇನು ಕಡಿಮೆ ! ಅವಳ ಗಂಡನಿಗೆ ೧|| ಲಕ್ಷದ ಆಸ್ತಿ ಇದೆ. ಗಂಡ ಧನಾಢ್ಯ !

ಗುಂಡೂ :— ಯಾರು ? ಮೋಹನ ! ಅವನ್ಯಾವಾಗ ಅಷ್ಟು ದೊಡ್ಡವ ನಾದನಪ್ಪಾ !

ಸುಬ್ಬ :— ಅವನ ಮಾವನ ಆಸ್ತಿ ಅವನಿಗೆ ಬಂದುಬಿಟ್ಟಿತಂತೆ.

ಗುಂಡೂ :— ಅದಕ್ಕೇನೋ ಇಷ್ಟು ಸೊಕ್ಕು ! ಆದರೆ ಒಂದು ವಿನಂತಿ ಕೇಳಿ. ಎಲ್ಲಾ ಆಸ್ತಿ ಮಗಳ ಹೆಸರಿನಲ್ಲಿ ಮಾಡಿಕೊಟ್ಟು ಅವಳನ್ನು ನನಗೆ ಕೊಡುವ ಹಾಗೆ ಮಾಡಿಬಿಟ್ಟರೆ...ಅಂ...ಏನೆನ್ನುತ್ತೀರಿ ? ಒಳ್ಳೇ ಉಪಕಾರವಾಗುತ್ತದೆ......ಅಲ್ಲವೆ ನೋಡಿ.

ಸುಬ್ಬ :— ಆಸ್ತಿಯ ಕಾಲುಭಾಗ ಈಚೆಕಡೆಗೆ ಹಾಕಬೇಕು.

ಗುಂಡೂ :— ಹೊ, ಷೋಕಾಗಿ...ಅದರಿಂದ ನನ್ನಪ್ಪನ ಗಂಟು ಮುಳುಗು ವದೇನು ?

ಸುಬ್ಬ :— ವರದಕ್ಷಿಣೆಯಿಲ್ಲದೆ ಲಗ್ನಮಾಡಿಕೊಳ್ಳಲಿಕ್ಕೆ ತಯಾರಾಗಿದ್ದಿರೋ?

ಗುಂಡೂ :— ಇಷ್ಟು ಆಸ್ತಿ ಬರುವಂತಿದ್ದರೆ ವರದಕ್ಷಿಣೆ ಏನಯ್ಯಾ... ಕಸದ ಕಡ್ಡಿ.

ಸುಬ್ಬ :— ಆಗಲಿ ಹಾಗಾದರೆ.

ಗುಂಡೂ :--ನೀವು ಹೇಳಿದಂತೇ ಕೇಳುತ್ತೇನೆ.

ಸುಬ್ಬ :--ನಡೆಯಿರಿ ಹಾಗಾದರೆ.

[ಹೋಗುತ್ತಾರೆ]

## ಅಂಕ ೩ ದೃಶ್ಯ ೫

[ಶಿವರಾಯರ ಮನೆ. ಕುಮುದೆಯು ಕೂತಿದ್ದಾಳೆ]

ಕುಮುದ :--ಈ ಸುದ್ದಿ ಹೇಗೆ ಹೊರಗೆ ಬಿತ್ತೋ? ಇದೆಲ್ಲಾ ದೇವರ ಆಟವೇಯೋ ಏನೋ? ಅಣ್ಣಾ ರಮಾ ಇವರ ಹೆಸರು ತೆಕ್ಕೊಂಡರೆ ಅಪ್ಪನಿಗೆ ಸಿಟ್ಟು.

ಶಿವ :—(ಪ್ರವೇಶ) ಏನೆನ್ನಲಿ... ಈ ದಿವಸ ದೊಡ್ಡ ಸಂಕಟದಲ್ಲಿ ಬಿದ್ದಿದ್ದೇನೆ.

ಕುಮುದ :--ಇನ್ನೇನು ಹೊಸ ಸಂಕಟ ಬಂತು ಈ ಹೊತ್ತು?

ಶಿವ :--ಹುಡುಗಿಯು ದೊಡ್ಡವಳಾದಳು ಎಂದು ಸುಬ್ಬಣ್ಣಾಚಾರ್ಯರು ಹೇಳುತ್ತಿದ್ದರು. ಏನು ಹೇಳಲಿ ನಿನಗೆ ಮಗೂ, ದೊಡ್ಡ ಪಂಚಾಯಿತಿ – ಇದು. ಒಂದು ಕಡೆ ಕೊಟ್ಟಮಾತು ತಪ್ಪಿಸಿ ಇನ್ನೊಂದು ಕಡೆ ಗಂಟು ಹಾಕುವುದೂ ಒಂದು ಬಿಕ್ಕಟ್ಟಿನ ಕೆಲಸ!!

ಕುಮುದ :—ಬೇರೆ ಕಡೆ ಗಂಟು...ಯಾರದಪ್ಪಾ...ಏನು - ಲಗ್ನವೋ - ಯಾರದು?

ಶಿವ :—ಇನ್ನಾರದು ಮಗೂ? ನಿನ್ನದೇ.

ಕುಮುದ :—ನನ್ನದೋ? ಹಿಂದೂ ಹೆಂಗಸರಿಗೆ ಒಬ್ಬನಿಗಿಂತ ಹೆಚ್ಚು ಗಂಡಂದಿರನ್ನು ಮಾಡುವ ರೂಢಿಯು ಯಾವ ಶಾಸ್ತ್ರದಲ್ಲಿ ಕಂಡು ಬಂತದು.

ಶಿವ :--ಗಂಡಂದಿರೆಲ್ಲಿಂದ ಮಗೂ? ನಿನ್ನ ಲಗ್ನವು ಆಗಲೇ ಇಲ್ಲವಲ್ಲ?

ಕುಮುದ:--ಬ್ರಾಹ್ಮಣರ ಬಾಯಿಯಿಂದ ಆಗಲಿಲ್ಲ ಆದರೆ ದೇವರ ಕಣ್ಣಿನ ಮುಂದೆ ಆದಹಾಗೆಯೇ. ಅವರ ಸಾಕ್ಷಿ ಬೀಳಲಿಲ್ಲ. ಬಾಡಿಗೆಯ ನಾಲಿಗೆಗಳು ಇನ್ನೂ ಮಂತ್ರವನ್ನು ಒಪ್ಪಿಸಲಿಲ್ಲ. ಆದರೆ ಪರಮಾತ್ಮನ ಸಾಕ್ಷಿಯಿಂದಾಗಿಯೇ ಇದೆಯಲ್ಲವೆ ಅಪ್ಪಾ?

ಶಿವ:---ಏನನ್ನುತ್ತಿಯೋ?...(ದಿಕ್ಕು ತೋಚದೆ) ದೊಡ್ಡ ಫಜೀತಿ ಬಂತು. ಆ ಆಚಾರ್ಯರನ್ನು ನಾನು ಗುಂಡೂರಾಯನಲ್ಲಿಗೆ ಕಳಿಸಿದ್ದೇನೆ.

ಕುಮುದ:—ಎಲ್ಲಿಯ ಗುಂಡೂರಾಯರು? ಆ ಗುಂಡುಕಲ್ಲೋ? ಪಶುವೋ?

ಶಿವ:--ಏನು? ಯಾರೂ ಪಶುಗಳ ಡಾಕ್ಟರ್ ಆಗಬಾರದೇನು?

ಕುಮುದ:—ಅವರು ಒಂದು ಸಲ ನನ್ನನ್ನು ನೋಡಲಿಕ್ಕೆ ಬಂದಿದ್ದರು. ಅವರೇ ಮತ್ತೂ ನೋಡಲಿಕ್ಕೆ ಬರುವವರಿದ್ದಾರೋ? ಏನು ತಿಳ ಕೊಳ್ಳಲಿಕ್ಕೆ? ಹುಟ್ಟಿಸಿದ ಅಪ್ಪನಿಗೇ ತನ್ನ ಮಕ್ಕಳ ಮನಸ್ಸನ್ನು ವರ್ಷಗಟ್ಟಲೆ ಇಟ್ಟುಕೊಂಡು ಸಾಕಿಯೂ ತಿಳಿದುಕೊಳ್ಳಲಿಕ್ಕಾಗು ವುದಿಲ್ಲ. ಈ ವರರು ಒಮ್ಮೆ ನೋಡಿಬಿಟ್ಟು ನಿಮಿಷದೊಳಗೆ ಎಲ್ಲಾ ತಿಳಕೊಂಡು ಬಿಡುತ್ತಾರಂತೆ! ಬೃಹಸ್ಪತಿಗಳೇ ಇವರು! ಸರ್ವಜ್ಞ ಮೂರ್ತಿಗಳು ವರರೆಂದರೆ! ಸಾಕು - ಇದೆಲ್ಲ ಮೂರ್ಖರ ಸಂತೆ. ಸ್ವಾರ್ಥಿಗಳ ಕಂತೆ ಪುರಾಣ. ಹುಡುಗಿಯೆಂದರೆ ಒಂದು ಪ್ರದರ್ಶನ ವಸ್ತು! ಮದುವೆಯಾಗುವವರೆಗೆ ಬಜಾರಿನ ಮಾಲು! ಯಾರೇ ಆಗಲಿ ಬಂದದ್ದೇ ಬಂದದ್ದು, ನೋಡಿದ್ದೇ ನೋಡಿದ್ದು! ಎಂತಹ ವಿವಾಹ ಧರ್ಮ!

ಶಿವ:--ನೀನು ಯಾವಾಗ ನೋಡಿದ್ದೀಯವರನ್ನು?

ಕುಮುದ:—ಮೊದಲೇ......ಅಣ್ಣನ ಲಗ್ನದಲ್ಲಿ.

ಶಿವ:--(ಸಿಟ್ಟಿನಿಂದ) ಅವನ ಹೆಸರೆತ್ತಬೇಡ.

ಕುಮುದ:—ಅಣ್ಣನ ಮುಂದೆ ನಿಮ್ಮ ಗುಂಡೂರಾಯನು ಶುದ್ಧ ಪಶುವೇ ...ನನ್ನ ಲಗ್ನ ಮೊದಲೇ ಆಗಿದೆಯಪ್ಪಾ, ಮುಂದೆ ನೀನು ಮಾಡ ಬೇಕಾಗಿಲ್ಲ.

ಶಿವ :—ಏನು – ಹಾಗೆ ಮೂರ್ಖತನ ಮಾಡುತ್ತೀಯಾ ?

ಕುಮುದ :—ಒಂದು ಮಾತು ಹೆಚ್ಚು ಆಡು, ಇನ್ನು, ತಕ್ಷಣವೇ ಹೊರಟು ಹೋಗಿಬಿಡುತ್ತೇನೆ ನೋಡು ಮನೆಬಿಟ್ಟು. ಮನಸ್ಸಿಗೆ ಬೇಡವಾದ ವನಿಗೆ ದೇಹವನ್ನೇ ಒಪ್ಪಿಸುವ ಅಥವಾಥವು ಲಗ್ನ ಮಾತ್ರ ನನ್ನಂಥ ಹುಡುಗಿಯರಿಗೆ ಸಾಧ್ಯವೇ ಅಲ್ಲ ನೋಡಪ್ಪಾ. ತಿರುಪೆ ಎತ್ತಿಯೇನು ಕಡೆಗೆ...ಬೇರೆ ಯಾವದಾದರೂ ಒಳ್ಳೇ ರೀತಿಯಿಂದ ಹೊಟ್ಟೆ ತುಂಬುವದಿಲ್ಲವಾದರೆ. ಮುಂದೆ ಕಷ್ಟ ಅನುಭವಿಸುವವರು ನೀವು ಕೊಟ್ಟು ಬಿಟ್ಟ ಹುಡುಗಿಯರೋ, ಕೈಬಿಟ್ಟ ಹಿರಿಯರೋ ?

ಶಿವ :—(ಸ್ವ) ರೆಕ್ಕೆ ಇಲ್ಲದ ಹಕ್ಕಿಗಳು. ಆದರೂ ಸೊಕ್ಕಿಗೇನೂ ಕಡಿಮೆ ಯಿಲ್ಲ.

ಕುಮುದ :—ನನ್ನ ಲಗ್ನಕ್ಕೆ ಯಾರ ವಿಘ್ನವೂ ಇರಲಾರದು. ಡಾಕ್ಟರರು ಈಗ ಬರುವವರಿದ್ದಾರೆ. ನೀನು ಸುಮ್ಮನೆ ಬೇರೆ ಮಾತನ್ನು ಯಾಕೆ ಆಡುತ್ತೀ ?

ಶಿವ :—ಬರಲಿ ನಿನ್ನ ಮನಸ್ಸಿನಂತೆಯೇ ಆಗಲಿ.

ಕುಮುದ :—ಬಂದರು ಅವರು.

[ಮೋಹನನ ಪ್ರವೇಶ]

ಶಿವ :—ಬನ್ನಿ. ನಾನೇ ನಿಮ್ಮನ್ನು ಕರೆಯ ಕಳುಹಿಸುವವನಿದ್ದೆ. ನಾನೇ ಬರುತ್ತಿದ್ದೆ. ಆದರೆ ನಿಮ್ಮ ಮಾವನ ಮೋರೆಯನ್ನು ನೋಡಕೂಡದು ಎಂದಿಟ್ಟುಕೊಂಡಿದ್ದೇನೆ.

ಮೋಹನ :—ಆಗಿಹೋದ ಮಾತೆಲ್ಲಾ ಈಗೇಕೆ ?

ಶಿವ :—ಈಗ ಕುಮುದೆಗೂ ನನಗೂ ಸ್ವಲ್ಪ ಚರ್ಚೆ. ಅವಳನ್ನು ಬಿಡುವು ದೆಂದರೆ ನನಗೆ ಕಷ್ಟ. ಆದರೇನು ಮಾಡಬೇಕು ? ಹುಡುಗಿಯ ಲ್ಲವೆ ಅವಳು ? ಎಂದಾದರೂ ಹೋಗುವವಳು. ಆವತ್ತೇ ಲಗ್ನ

ವಾಗಿದ್ದಿದ್ದರೆ ಚೆನ್ನಾಗಿತ್ತು. ಆದರೆ (ನಿಟ್ಟುಸಿರು ಬಿಡುತ್ತಾ) ಆ ಮಾತೇಕೀಗ ನನ್ನ ಮಗಳು ನನ್ನ ಹೊಟ್ಟೆಯ ಕರುಳು...

ಮೋಹನ :—(ಸ್ವ) ಹೊಟ್ಟೆಯ ಕರುಳೋ ದುಡ್ಡಿನ ಮರುಳೋ ? (ಶಿವ ನಿಗೆ) ರಮೇಶನೇನು ಮತ್ತೆ ?

**ಶಿವ** :—(ಬೇಜಾರದಿಂದ) ಆದಿರಲಿ ಅಂದರೆ. ನಿಮ್ಮ ಅಡಚಣೆ ತೀರಿತೋ ಇಲ್ಲವೋ ? ಮುಂದಿನ ವಾರದಲ್ಲಿ ಮುಹೂರ್ತವಿಟ್ಟರೆ ಸಾಕಷ್ಟೆ ?

ಮೋಹನ :—(ತಾತ್ಸಾರದಿಂದ) ಮು...ಹೂ...ರ್ತ...ಆದರ...

ಶಿವ :—ಅದೇನುಳಿಯಿತು ? ಮುಂದಿನ ವಾರದಲ್ಲಿಯೋ ಲಗ್ನವಾಗಬೇಕೆಂದು ಕುಮುದೆಯ ಹಟ. ನನ್ನ ಆಗ್ರಹವೇನೂ ಇಲ್ಲ. ನಿಮ್ಮನ್ನು ಮನೆಯ ಅಳಿಯನನ್ನಾಗಿ ಮಾಡಬೇಕೆಂದರೆ ಸಂತೋಷವೇ. ಆದರೆ ನನಗೆ ಸಾಧ್ಯವೇ ನಿಮ್ಮಂಥ ದೊಡ್ಡವರ...

ಮೋಹನ :—ಸ್ಪಷ್ಟವಾಗಿ ಆಡಿದರೆ ನಿಮಗೆ ಸಿಟ್ಟು ಇಲ್ಲವಷ್ಟೆ ? ಮಾವನ ಸುದ್ದಿ ಹೇಳಿದರೆ ನಿಮಗೆ ಸಿಟ್ಟು...ಇರಲಿ. ನಾನಾತನಿಗೆ ಒಳಪಟ್ಟ ವನೇಯಷ್ಟೆ ?

**ಶಿವ** :—ಅವರಿದ್ದರೂ ಮಾಡುವದೇನು ? ಯಾವಾಗ ಮುಹೂರ್ತ ? ಕುಮುದಾ...ಆ ಪಂಚಾಂಗ ತಕೊ್ಕೋ.

ಮೋಹನ :—ಆ ಪಂಚಾಂಗವಿರಲಿ. ನನಗೊಂದು ದೊಡ್ಡ ಕೆಲಸವಿದೆ.

**ಶಿವ** :—ನಿಮ್ಮಂಥವರಿಗೂ ಏನು ಬಂತು ?

ಮೋಹನ :—ಒಂದು ವೀಕ್‌ನೆಸ್ * ಕೊರತೆ ಎಂದಿಟ್ಟುಕೊಳ್ಳಿ. ಮದುವೆ ಅಟ್ಟಹಾಸದಿಂದಾಗಬೇಕು. ಅದಕ್ಕೆ ತಕ್ಕ ವ್ಯವಸ್ಥೆ ಮಾಡಬೇಕ ಲ್ಲವೆ ನಾನು ?

**ಶಿವ** :—ಅಟ್ಟಹಾಸ! ಸಾದಾ ಲಗ್ನವೆಂದು ಹೇಳಿದಿರಲ್ಲವೆ ?

---

* Weakness

ಮೋಹನ :—ಹೌದು, ಆದರೆ ಕಡೆಗೆ ನೀವು ಹಾಕಿದಷ್ಟಾದರೂ ಒಡವೆಗಳನ್ನು ನಾನು ಹಾಕಬೇಡವೆ?

ಶಿವ :—ಒಡವೆಗಳೇ? ಎಲ್ಲಿವೆ?

ಮೋಹನ :—ಯಾಕೆ? ಕುಮುದಾದೇವಿಯ ತಾಯಿಯ ಒಡವೆಗಳಿವೆ. ಅವು ಎಲ್ಲವೂ ಅವಳವೇ ಎಂದು ಆ ಹೊತ್ತು ಹೇಳಿದಿರಲ್ಲಾ?

ಶಿವ :—ಓಹೋ ಎಷ್ಟು ದಿನಗಳಾದವದಕ್ಕೆ! ಅವನ್ನೆಲ್ಲಾ ಮಾರಿಬಿಟ್ಟು ದುಡ್ಡು ಬ್ಯಾಂಕಿನಲ್ಲಿಟ್ಟಿದ್ದೇನೆ ನಾನು.

ಮೋಹನ :—ಆ ದುಡ್ಡು ತಂದರೆ ಮತ್ತೆ ಒಡವೆ ಮಾಡಿಸುವದೇನೂ ಕಷ್ಟವಿಲ್ಲ. ಸ್ವಲ್ಪ ಕಡಿಮೆಯಾದೀತ..

ಶಿವ :—ಹಾಗಾಗಲೇ ಬೇಕೆಂದು ಕುಮುದೆಯ ಇಚ್ಛೆಯೇನು? (ಆಕೆಯನ್ನು ನೋಡುತ್ತ)

ಕುಮುದ :—ಪುಣ್ಯವೇನದರಲ್ಲಿ? ಅದರ ಮೇಲೆ ನನ್ನ ಹಕ್ಕೇ.

ಶಿವ :—(ಸ್ವ) ಅಬ್ಬಬ್ಬಾ...ಇದು ವಿದ್ಯೆಯ ಸೊಕ್ಕು! (ಮೋಹನನಿಗೆ) ನಾನು ಕುಬೇರನೆಂದು ನೀವು ತಿಳಕೊಳ್ಳಲಿಲ್ಲವಲ್ಲ?

ಮೋಹನ :—ಕನ್ಯಾದಾನಕ್ಕೆ ತಕ್ಕ ದಕ್ಷಿಣೆ, ಅಷ್ಟೇನೋ ನ್ಯಾಯವೇ ಅಲ್ಲವೇ?

ಶಿವ :—ಆದರೆ ವರದಕ್ಷಿಣೆ ಅಲ್ಲವಲ್ಲ! ಅದರ ಧಿಕ್ಕಾರವಿದೆ ನನಗೆ!

ಮೋಹನ :—ಕೊಡುವುದಕ್ಕೊ ತಕ್ಕೊಳ್ಳುವದಕ್ಕೊ?

ಶಿವ :—(ಸ್ವ) ಏನು ಮಾಡಲಿ? ಕುಮುದೆಯ ಮೋರೆ ನೋಡಿ ಬಾಯಿ ಮುಚ್ಚಿಕೊಳ್ಳಬೇಕಾಗಿದೆ.

ಮೋಹನ :—ರಮೇಶನಿಗಾಗಿ ನಾಲ್ಕು ಸಾವಿರ...

ಶಿವ :—ಅಯ್ಯೋ ಅದು ಎಲ್ಲಿಂದ ಬಂತು?

ಮೋಹನ :—ಬರಬೇಕೇಕೆ? ಬಂದರೆ ನಿಮಗೇನು ಉಪಯೋಗವಾಗುತ್ತಿತ್ತು? ಅವನನ್ನು ವಿಲಾಯತಿಗೆ ಕಳಿಸಲಿಕ್ಕಲ್ಲವೆ ಲೆಕ್ಕಹಾಕಿದ್ದು ಆಗ? ಅದೆಲ್ಲಿ ಉಳಿಯಿತು ಈಗ?

ಶಿವ :—ನೀವು ಲಕ್ಷಾಧೀಶರು. ನಿಮಗೂ ನನಗೂ ಸರಿಹೋಗುತ್ತದೆಯೇ?

ಮೋಹನ :—ಆದರೇನು ಮಾಡಲಿ? ಲಗ್ನದ ಖರ್ಚು ಒಡವೆಗಳು ವರದಕ್ಷಿಣೆಯಿಂದಲೇ ಆಗಬೇಕೆಂದು ಆ ನನ್ನ ಮಾವಾ 'ವಿಲ್'ನಲ್ಲಿ ಒಂದು ಮಾತು ಗೀಚಿ ಸಿಕ್ಕಿಸಿ ಬಿಟ್ಟಿದ್ದಾನೆ ನನ್ನನ್ನು.

ಶಿವ :—ಏನಾದರೂ ಅನ್ನುತ್ತೀರಿ.

ಮೋಹನ :—ನೀವೂ ನಿಮ್ಮ ಹೆಂಡತಿಯ ಮರಣ ಕಾಲದ ಆಶೆಯನ್ನು ಹೇಳಿದಿರಲ್ಲವೆ ಆ ಹೊತ್ತು? ಆಗ ನಾವೂ ಹಾಗೆಯೇ ತಿಳಿದು ಕೊಂಡಿದ್ದಿದ್ದರೆ?

ಶಿವ :—ಈ ಹುಡುಗಿಯರು ಹುಟ್ಟುವುದು ಬೇಡಪ್ಪಾ ದೇವರೇ!

ಮೋಹನ :—ನಿಮ್ಮ ಮಗನಿಗೆ ನಾಲ್ಕು ಸಾವಿರ ತಕ್ಕೊಂಡಿರಿ. ಅವನು ಬರೆಯ ಬಿ. ಎ., ನಾನೋ ಎಂ. ಡಿ. ಐದು ಸಾವಿರವಾದರೂ ಕೊಡತಕ್ಕದ್ದೇ ಅಲ್ಲವೆ ನನ್ನ ಯೋಗ್ಯತೆಗೆ?

ಶಿವ :—ಎಲ್ಲಿಂದ ತರಲಿ?

ಮೋಹನ :—ಯಾಕೆ ನಿಮ್ಮ ಪೆಟ್ಟಿಗೆಯೊಳಗಿನಿಂದ ಮಗನಿಗೆ ಕದಿಯಲಿಕ್ಕೆ ಅಷ್ಟಿತ್ತು. ಅದರಲ್ಲಿ ನನಗೆ ಕೊಡಲಿಕ್ಕೆ ಮಾತ್ರ ಇಲ್ಲವೊ?

ಶಿವ :—(ಸ್ವ) ಅಯ್ಯೋ ಮೋರೆಗೆ ಮಸಿ ಹಚ್ಚುತ್ತಿದ್ದಾನಲ್ಲಾ, (ಪ್ರ) ಡಾಕ್ಟರ್, ಬೇಡ. ಸುಮ್ಮನೆ ಈ ಕಷ್ಟ ಕೊಡಬೇಡಿ.

ಮೋಹನ :—ಸಮಯಕ್ಕೆ ಸರಿಯಾದ ಮಾತು ಹೇಳುವುದಲ್ಲವೆ ಬುದ್ಧಿಯ

ಲಕ್ಷಣ? ಹಿರಿಯರಿಂದ ಕಲಿತ ಗುಣ ಇದೊಂದು. ಆದಿರಲಿ. ಆ ಹೊತ್ತು ಡಾಯರಿ ತೋರಿಸಿದಿರಲ್ಲಾ, ಅದರಲ್ಲಿ ರೂ. ೨೫,೦೦೦ ದ ನೋಟುಗಳ ನಂಬರುಗಳಿದ್ದವು.

ಶಿವ :—(ಹಣೆ ಬಡಕೊಂಡು) ನನ್ನ ಹಾಳು ಲೆಕ್ಕಾಚಾರ ಯಾಕದೆಲ್ಲ?

ಮೋಹನ :—ವರದಕ್ಷಿಣೆದೇನಾದರೂ ಠರಾವಾಯಿತೊ ಮತ್ತೆ?

ಶಿವ :—ಆ ಶಬ್ದವೆಂದರೆ ಬದ್ಧದ್ವೇಷ ನನಗೆ.

ಮೋಹನ :—ವರದಕ್ಷಿಣೆ ಎಂದುಕೊಳ್ಳಬೇಡಿರಿ. ಹುಡುಗಿಯ ಸುಖಕ್ಕೆ ಎಂದುಕೊಳ್ಳಿ. 'ಟೋಕನ್ ಆಫ್ ಲವ್' * ಎಂದುಕೊಳ್ಳಿ, ಪ್ರೇಮಸಂಕೇತವೆನ್ನಿ ಏನಾದರೂ ಎಂದುಕೊಳ್ಳಿ. ಹೆಸರಿನಿಂದೇನು?

ಶಿವ :—ನನಗೇನೂ ಈ ಸಂಬಂಧ ಅಷ್ಟು ಇಷ್ಟವಾಗಿಲ್ಲ.

ಮೋಹನ :—ಹಾಗಾದರೆ ಬರುತ್ತೇನೆ, ನಮಸ್ಕಾರ.

ಕುಮುದ :—(ಮೋಹನನಿಗೊಂದು ಕುರ್ಚಿಯನ್ನು ತೋರಿಸಿ) ಸ್ವಲ್ಪ ದಯಮಾಡಿ. (ಶಿವರಾಯನಿಗೆ) ಅಪ್ಪಾ. ನನ್ನ ಸುಖಕ್ಕಿಂತಲೂ ದುಡ್ಡು ಹೆಚ್ಚೋ ನಿನಗೆ! ನಾನು ಬೇಡವಾಗಿದ್ದೇನೋ ನಿನಗೆ?

ಶಿವ :—ನನಗೇನೋ ಈ ಸಂಬಂಧ ಬೇಡ. 'ಲವ್ ಮ್ಯಾರೇಜ್' ‡ ಎಂತ ಹೆಸರು ಇದಕ್ಕೆ. ಮೇಲೆ 'ಟೋಕನ್ ಆಫ್ ಲವ್' ಏನು ಬಂತು? ನೀನೇ ನನ್ನ 'ಟೋಕನ್' ಕುಮುದಾ.

ಕುಮುದ :—ಅಪ್ಪಾ ಈ ಲಗ್ನ ಮುರಿದರೆ ಮಾತ್ರ ನಿನ್ನ ಪಾದದ ಮೇಲೆ ತಲೆ ಒಡೆದುಕೊಂಡು ಪ್ರಾಣವನ್ನೇ ಬಿಟ್ಟುಬಿಡುತ್ತೇನೆ ನೋಡು.

ಶಿವ :—ಎಂಥ ಹುಚ್ಚು ಇದು! ನಿನಗೇನೂ ತಿಳಿಯುವದಿಲ್ಲ (ಮೋಹನನಿಗೆ) ಏನಯ್ಯಾ ನಿಮಗೆ 'ಲವ್' ಎಂದರೆ ಏನೂ ಗೌರವವಿಲ್ಲವೇ ನದರಲ್ಲಿ?

---

* Token of love ‡ Love marriage

ಮೋಹನ :—' ಲವ್ ' ಅಂದರೆ ಪ್ರೇಮ, ಪರಿಣಯ. ಇದರ ಅನುಭವವೇ ಇಲ್ಲ ನನಗೆ. ಅದಕ್ಕಾಗಿ ಗೊತ್ತಿಲ್ಲದ್ದನ್ನು ಹಿಡಕೊಂಡು ಗೊತ್ತಿದ್ದ ದುಡ್ಡಿನ ವಿಷಯವನ್ನು ಬಿಟ್ಟುಬಿಡುವುದು ಮೂರ್ಖತನವೇ. ಅದನ್ನು ಕೇಳಲಿಕ್ಕೆ ನಾಚಿಕೆ ಏನು ನನಗೆ! ಸ್ವಲ್ಪ ಇತ್ತು ಮೊದಲು. ಆ ಹೊತ್ತು ರಮೆಯ ಲಗ್ನಕ್ಕೆ ಮುಂಚಿತವಾಗಿ ಹಿರಿಯರಾದ ನಿಮ್ಮ ವಾದ ಕೇಳಿ ಅದೂ ಹೋಯಿತು. ಹಿರಿಯರಂತೆ ಕಿರಿಯರೂ ನಡೆಯಬೇಕೆಂದಲ್ಲವೇ ದೊಡ್ಡವರ ಉಪದೇಶ?

ಶಿವ :—ಮತ್ತೂ, ಮತ್ತೂ ಅವರ ಹೆಸರೇ. ಅವರ ಭೂತಗಳು ಇಲ್ಲೇಕೆ?

[ಜವಾನನು ತಂತಿಯೊಂದನ್ನು ತರುತ್ತಾನೆ]

ಕುಮುದ :—ಎಲ್ಲಿಂದ ಈ ತಂತಿ? ಅಣ್ಣ ಕ್ಷೇಮವಾಗಿಯೇ ಇದ್ದಾನಷ್ಟೆ.

ಶಿವ :—ಅವನಿಗೇನು ಸಂಕಟ? ಹರಾಮ ಖೋರ... ನಾಲ್ಕು ಕಡೆಯಿಂದಲೂ ಹೊಂಡ ತೆಗೆದಿಟ್ಟಿದ್ದಾನೆ ನನಗೆ. (ಅದನ್ನು ನೋಡಿ) ಮುಣುಗಿತು! ಎಲ್ಲವೂ ಮುಣುಗಿತು! ಮುಗೂ, ಎಲ್ಲಾ ಹಾಳಾಯಿತು!

ಕುಮುದ :—ಏನಾಯಿತು? ಏನಾಯಿತು?

ಶಿವ :—ಆ ಹುಡುಗನ ಶಾಪವೇ ನನಗೆ ಬಡಿಯಿತು. ಡಾಕ್ಟರ್ ನೋಡಿರಿದನ್ನು. ಮುಣುಗಿತು, ಎಲ್ಲಾ ಮುಣುಗಿತು!

ಮೋಹನ :...(ಗಂಭೀರ ಕಂಠದಿಂದ) ಹಂ, ಕರ್ಮಗೀತೆ— ಇನ್ನೇನು-! ಬರುತ್ತೇನೆ. ನಮಸ್ಕಾರ.

ಶಿವ :—ಇದೇನು! ನೀವೇಕೆ ಹೋಗುತ್ತೀರಿ? ಈಗ ಬದುಕುವುದೇ ಕಷ್ಟವೆಂದು ತೋರುತ್ತದೆ. ಹೋಯಿತು, ಎಲ್ಲಾ ಹೋಯಿತು!

ಮೋಹನ :—ಎಲ್ಲಾ ಹೋಯಿತೋ?

ಶಿವ :—ನನ್ನ ಕರ್ಮ.

ಮೋಹನ :—ಇರಬಹುದು. ಬಿತ್ತಿದಂತೆಯೇ ಪೈರ ಸೊತ್ತು. ನಮಸ್ಕಾರ.

ಶಿವ :—(ಆತನ ಕೈಹಿಡಿದು) ಕುಮುದಾ, ನೋಡು. ನಿನ್ನ ಪ್ರೀತಿಯು ಇವರಲ್ಲಿದೆ. ಆದರೆ ನೋಡಿದೆಯೋ - ಇವರಿಗೆ ನಿಜವಾಗಿ ನಿನ್ನಲ್ಲನು ರಾಗವಿದೆಯೋ ? ನೋಡು. ನನ್ನ ಐಶ್ವರ್ಯ ಹೋಯಿತು ಎಂದ ಕೂಡಲೇ ಹೊರಟೇಬಿಟ್ಟರು.

ಕುಮುದ :—ಆದರೂ ನಾನು ಅವರನ್ನೇ ಪ್ರೀತಿಸುತ್ತೇನಪ್ಪಾ. ಪ್ರೇಮ ಕ್ಕೂ ವ್ಯಾಪಾರವೇ ? ಲೆಕ್ಕಾಚಾರವೇ ? ಮನೋರಾಜ್ಯದ ರಾಜ ನೆಂದರೆ ಪ್ರೇಮವೇ ಅಲ್ಲವೆ ?

ಶಿವ :—(ನಿಂದಿಸಿ) ಆದರೆ ನೋಡುತ್ತಿರು ಮತ್ತೆ.

[ಗುಂಡೂರಾವ್ ಸುಬ್ಬಣ್ಣಾಚಾರ್ಯರ ಪ್ರವೇಶ]

(ಗುಂಡೂಗೆ) ಯೋಗ್ಯಕಾಲದಲ್ಲಿ ಬಂದಿರಿ. ಆಚಾರ್ಯರು ನಿಮ್ಮ ವಿಷಯ ಮೊದಲೇ ಹೇಳಿದ್ದರು. ವರದಕ್ಷಿಣೆ ಇಲ್ಲದೆ ಮದುವೆ–

ಗುಂಡೂ ;—ಓಹೋ ! ಸಿದ್ಧನೇ.

ಮೋಹನ :—ಆದರೆ ಈ ತಂತಿ ನೋಡಿದ್ದೀಯೋ? (ಕುಮುದೆಯು ಆದನ್ನು ಕೊಡುತ್ತಾಳೆ.)

ಗುಂಡೂ :—ಅರರೇ - ಇದೇ ಬ್ಯಾಂಕಿನಲ್ಲಿ ನಿಮ್ಮ ದುಡ್ಡೆಲ್ಲಾ ಇತ್ತಲ್ಲವೆ ? ಅಯ್ಯೋ......ಏನೋ ! ಕಷ್ಟವಿದು ! ಹಣ್ಣೆಲೆಗಳಂತೆ ಬ್ಯಾಂಕು ಗಳುದುರಿಬೀಳುತ್ತವಲ್ಲಾ ಈ ಕಾಲದಲ್ಲಿ !

ಸುಬ್ಬ :—ಏನೆಂದಿರಿ ! ಬ್ಯಾಂಕು ಮುಣುಗಿತೋ !! ಮುಗಿಯಿತು ಎಲ್ಲಾ ಈಗ !!!

ಗುಂಡೂ :—ಬರುತ್ತೇನೆ. ನಮುಸ್ಕಾರ.

ಶಿವ :—ಇದೇನು ? ಕುಮುದೆಯೊಡನೆ ಲಗ್ನಮಾಡಿಕೊಳ್ಳಲಿಕ್ಕೆ ಸಿದ್ಧರಾಗಿ ದ್ದರಲ್ಲವೇ ನೀವು ?

ಗುಂಡೂ :—ಹಾಗೆಲ್ಲಿ ಹೇಳಿದ್ದೇನಯ್ಯಾ ನಾನು?

ಮೋಹನ :—ವರದಕ್ಷಿಣೆ ಇಲ್ಲದಂತೆ ಒಬ್ಬ ವರನನ್ನು ತಂದುಕೊಡುತ್ತೇನೆ ಎಂದು ಹೇಳಿರಬಹುದು. ಹೇಳುವದರಲ್ಲೋ ಕೇಳುವದರಲ್ಲೋ ಸ್ವಲ್ಪತಪ್ಪಾಗಿರಬೇಕು.

ಗುಂಡೂ :—ಇಲ್ಲ, ನಿಮಗೆ ಭ್ರಮೆಯುಂಟಾಗಿರಬೇಕು. ಸಹಜವೇ.

ಶಿವ :—ಹೌದು. ನಿಜವಾಗಿಯೂ ಭ್ರಮೆಯುಂಟಾಗಿದೆ. ದಾರಿದ್ರ್ಯವು ಬಂದಿದೆ. ನೀಲಕಂಠ ಶಾಸ್ತ್ರಿಯ ಗತಿಯೇ ನನಗೂ ಬಂತೋ! ಅಯ್ಯೋ ದರಿದ್ರರ ಗತಿಯು ಇಷ್ಟೆಯೋ? ಅವರಿಗೆ ಬಂಧುಗಳೇ ಇಲ್ಲವೊ? ಈಗಲಾದರೂ ನನ್ನ ದಾರಿದ್ರ್ಯದಲ್ಲಿ ಕನಿಕರವಿಟ್ಟು ವರ ದಕ್ಷಿಣೆಯ ಹಟವನ್ನು ಬಿಡಲಾರಿರಾ?

ಗುಂಡೂ :—(ಸುತರಾಂ ಇಲ್ಲ-ಎಂಬಂತೆ) ಊ ಹುಂ-ನಮ್ಮ ಮನೆತನದ ಮರ್ಯಾದೆಯನ್ನೂ ಇಟ್ಟುಕೊಳ್ಳಬೇಕಾಗಿದೆ.

ಮೋಹನ :—ವರದಕ್ಷಿಣೆಗೂ ದಾರಿದ್ರ್ಯಕ್ಕೂ ಏನು ಸಂಬಂಧ? ಶಾಸ್ತ್ರ ರೂಢಿ ಸಂಪ್ರದಾಯಗಳಿಗೆ ದಯಾದಾಕ್ಷಿಣ್ಯಗಳಿವೆಯೋ? ವರ ದಕ್ಷಿಣೆ ಎಂಬುದು ವರನಜನ್ಮಸಿದ್ಧ ಹಕ್ಕು ನಿಸರ್ಗಸಿದ್ಧ, ನಿರ್ವಾಣ ಸಿದ್ಧ ಹಕ್ಕು. ಕನ್ಯೆಯು ಸುಶಿಕ್ಷಿತಳಾಗಿ ಸುಂದರಳಾಗಿದ್ದರೂ ತಂದೆಯು ವರದಕ್ಷಿಣೆಯನ್ನು ಕೊಟ್ಟೇ ತೀರಬೇಕಾದ್ದೇ. ಇದೇ ಉಚ್ಚಕುಲ ಪುರುಷರ ಧರ್ಮವೆಂದು ನೀವೇ ಅಂದು ಹೇಳಿದಿರಷ್ಟೆ. ಹಿರಿಯರ ಅನುಕರಣ.

ಶಿವ :—ಈಗ ನಾನು ಭಿಕಾರಿಯಾಡೆ. ದಯಾದೃಷ್ಟಿಯಿಂದ ನೋಡಬೇಕು ನಮ್ಮಂಥವರನ್ನು ಇದೇ ಉಚ್ಚಧರ್ಮ.

ಗುಂಡೂ :—ಊಹುಂ.

ಮೋಹನ :—(ಸಂತಾಪದಿಂದ) ರಾಯರೇ, ನನ್ನ ಮಾವನು ಬಂದಾಗ ಆತನೇನಾದರೂ ಶ್ರೀಮಂತನಾಗಿದ್ದನೇನು? ನಿಮಗೆ ಮನೆಯಾ ದರೂ ಇದೆ. ಆತನಿಗದೂ ಇಲ್ಲ. ಆತನು ಯಾಚಕನಾಗಿ ಬಂದಿ

ದ್ದನು, ನೀವು ದಾತರಾಗಿದ್ದಿರಿ. ಆದರೆ ನೀವು ವರನ ತಂದೆಯಾಗಿದ್ದುದರಿಂದ ನಿಮ್ಮ ವೈಭವದಿಂದ ಮದೋನ್ಮತ್ತರಾಗಿ ಆತನನ್ನು ಧಿಕ್ಕರಿಸಿದಿರಿ, ಹಿಂಸೆಗೆ ಒಳಪಡಿಸಿದಿರಿ. ಆದರೆ ಕಾಲಚಕ್ರ ಭ್ರಮಣವು ಇನ್ನೂ ನಿಲ್ಲಲಿಲ್ಲ, ಸ್ತಬ್ಧವಾಗಲಿಲ್ಲ. ಅದಿರುವವರೆಗೆ ಈ ಹೊತ್ತು ಸೊಕ್ಕಿದವನು ನಾಳೆ ಭಿಕ್ಷೆ ಬೇಡುವವನಾಗಬಹುದು. ಈಶ್ವರನ್ಯಾಯವು ಒಂದಲ್ಲ ಒಂದು ಕಾಲದಲ್ಲಿ ತೋರಿಯೇ ಬರುವುದು.

ನಿಮ್ಮ ಹುಡುಗಿಯು ನನ್ನ ವಾಗ್ದತ್ತ ಸೊತ್ತು. ಇದು ನಿಮಗೂ ಗೊತ್ತು. ಚೆನ್ನಾಗಿಯೇ ಗೊತ್ತು. ಆಕೆಯು ನನ್ನನ್ನು ಬಿಟ್ಟು ಬೇರೆಯವನನ್ನು ವರಿಸಳು. ನಮ್ಮಿಬ್ಬರ ಜೊತೆಯನ್ನು ದೈವದ ದೇದೀಪ್ಯ ರೂಪವಾದ ಪ್ರೇಮವೇ ಮಾಡಿಬಿಟ್ಟಿದೆ. ಆದರೆ ರೂಢಿಗೆ ಸರಿಯಾಗಿ, ನಿಮ್ಮಂಥವರ ಮನಸ್ಸಿಗೆ ಸರಿಯಾಗಿ, ಇನ್ನೂ ಕನ್ಯಾದಾನ...ಅ...ಆ...ದಾನ-ವಾಗಬೇಕು. ನಿಮ್ಮ ಮನಸ್ಸು, ನಿಮ್ಮ ಧರ್ಮ, ನಿಮ್ಮಂಥವರಿಗೆ ಪ್ರಿಯವಾದ ಕರ್ಮ, ಪುಣ್ಯ ಕರ್ಮ, ಈ ಕನ್ಯಾದಾನ. ಅದನ್ನು ಮಾಡಿದರೆ ಅಲ್ಲವೇ ಶಾಸ್ತ್ರ? ಮಾಡಿ ಅದನ್ನೂ ಮಾಡಿ, ಶಾಸ್ತ್ರ ಇನ್ನೂ ಇದೆ. ದಕ್ಷಿಣೆ ಇಲ್ಲದೆ ದಾನ ಸಫಲವಾಗುವುದಿಲ್ಲ, ಇದೂ ನಿಮ್ಮಂಥವರದೇ ಶಾಸ್ತ್ರ.

ಶಿವ :—ಸಾಕು ಸಾಕು ಮಾಡಿ ಸಾಕು.

ಮೋಹನ :—ನನಗೇನು ಗೊತ್ತು? ಈ ಕಾಲದ ಯುವಕರು ಕೆಟ್ಟ ಪ್ರಾಣಿಗಳು. ಧರ್ಮಲಂಡರು ಎಂದು ಅನೇಕ ಹಿರಿಯರು ಹೇಳುತ್ತಾರೆ. ಧರ್ಮವೆಲ್ಲಾ ಹಿರಿಯರ ಹಕ್ಕು. ಆದುದರಿಂದ ನಿಮ್ಮ ಮೇಲ್ಪಂಕ್ತಿಯನ್ನನುಸರಿಸಿ ನಡೆದರಾಯಿತಲ್ಲವೇ? ನಿಮ್ಮ ಹಿಂದೆ ನಮಗೂ ಮುಕ್ತಿ. ತಮ್ಮ ಮಾಲೆ ತಮ್ಮ ಕೊರಳಿಗೇ ಬಿದ್ದರೆ ಲಾಭವೇ ಅಲ್ಲವೆ? ಚಿಂತೆ ಏಕದಕ್ಕೆ?

ರಾಯರೇ - ನಿಮಗಿನ್ನೂ ಏನು ಕಮ್ಮಿ. ಮನೆಯಿದೆ, ಸಾಮಾನಿದೆ, ವಸ್ತು ಒಡವೆಗಳಿವೆ. ಇನ್ನೂ ಎಷ್ಟೋ ಇದೆ. ನನ್ನ ಮಾವನಂತಲ್ಲ. ಇವನ್ನು ಮಾರಿದರೆ ದುಡ್ಡು ಬಾರದೆ ಇರುತ್ತದೆಯೋ? ಐದು ಸಾವಿರದ

ಗಂಟು ಕೂಡಿಸಿ ವರನಾದವನಿಗೆ ಕೊಟ್ಟು ಬಿಡಿರಿ. ಧರ್ಮಕಾರ್ಯ, ಪುಣ್ಯದ ಕೆಲಸ, ಬ್ರಹ್ಮಕರ್ಮಕ್ಕೆ ಸುಸಂದರ್ಭ. ತಾನಾಗಿ ಬಂದ ಸುಸಮಯನ್ನು ಪೊಳ್ಳು ಚಿಂತೆಯಿಂದ ಏಕೆ ಕಳಕೊಳ್ಳಬೇಕು ? " ರೂಢಿರ್ಬಲಿಯಸಿ " ಧರ್ಮಕ್ಕೆ ದಯಾದಾಕ್ಷಿಣ್ಯಗಳೆಲ್ಲಿ ? ಧರ್ಮಾತ್ಮರಿಗೆ ಧರ್ಮಬಿಟ್ಟರೆ ಬೇರೆ ಉಪಾಯವಿಲ್ಲ. ಹಿರಿಯರ ಹಾದಿ ಬಿಟ್ಟರೆ ಕಿರಿಯರಿಗೆ ಬೇರೆ ಗತಿಯಿಲ್ಲ. ನನಗೂ ಹೀಗೆ ಕಠೋರವಾಗಿ ಆಡಬೇಕಾಯಿತು. ಏನು ಮಾಡಲಿ, ಧರ್ಮ ಹಾಗಿದೆ. ವರಸಂಪ್ರದಾಯವೂ ಹಾಗಿದೆ ನಾನೇನೂ ಅಂಥವನಲ್ಲ. ರಾಯರೇ, ನನ್ನ ಮನಸ್ಸು ಮೆತ್ತಗಾಗಿಯೇ ಇದೆ. ಹಿರಿಯರು ಮಾಡಿಟ್ಟ ಧರ್ಮ ಹಾಗಿದೆ - ಏನುಮಾಡಲಿ.

ಶಿವ :—ಸಾಕು ಡಾಕ್ಟರ್ ಇನ್ನು ಸಾಕು. ದಾರಿದ್ರ್ಯವು ನನ್ನ ಕಣ್ಣನ್ನು ತೆರೆದೇಬಿಟ್ಟಿತು. ಮಗನ ಮದುವೆಯ ಕಾಲದ ಉನ್ಮಾದಕ್ಕೆ ಹುಡುಗಿಯ ಮದುವೆಯ ಕಾಲವೇ ಪ್ರಚೇತಾಂಜನವಾಗಿ ಬಂದು ಕಣ್ಣಿಗೆ ಅದೂ ಬಿದ್ದುಬಿಟ್ಟಿತು.

ಮೋಹನ :—ಇರಬಹದು, ಇರಬಹುದು. ಕ್ಷಣಿಕ ಪ್ರಪಂಚವಿದು ಅಲ್ಲವೇ ಅಚಾರ್ಯರೇ !

ಶಿವ :—ನೀಲಕಂಠ ಶಾಸ್ತ್ರಿಗಳಿಗೆ ನಾನು ಮಾಡಿದ ಅನ್ಯಾಯಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ನೀವೇ ವಿಧಿಸಿರಿ. ಅವರಿಗಾಗಿ ನನ್ನ ಮಗನು ಎಂತಹ ಧೈರ್ಯದ ಕೆಲಸಮಾಡಿದನು ! ಎಂತಹ ಔದಾರ್ಯದ ಸೇವೆಯನ್ನು ಮಾಡಿದನು !...ಆದರೆ ಕಠಿಣಾತ್ಮಕ ಸ್ವಾರ್ಥಿಯಾದ ನಾನು ಅವನನ್ನು ಹೆಂಡತಿಯೊಡನೆ ಓಡಿಸಿಬಿಟ್ಟೆನಲ್ಲಾ ! ಕೈಕೆಯು ರಾಮನನ್ನು ಅಟ್ಟಿಬಿಟ್ಟಳು. ರಾಮನು ಸೀತೆಯನ್ನು ಹೊರಡಿಸಿಬಿಟ್ಟನು. ಆದರೆ ಅವರಿಬ್ಬರ ಅತ್ಯಾಚಾರವನ್ನೂ ಕೂಡಿಸಿಕೊಂಡು ನಾನೊಬ್ಬನೇ ಸೀತಾರಾಮರನ್ನೂ ಓಡಿಸಿಬಿಟ್ಟೆನೇ! ಅವರ ಪಾಪವು ಅವರನ್ನೂ ಬಿಡಲಿಲ್ಲ. ಕೈಕೆಯ ಮಾಂಗಲ್ಯವನ್ನೇ ಹರಿದುಬಿಟ್ಟಿತು. ಭರತನು ಅವಿಧೇಯನಾದನು. ತನ್ನ ಕರುಳೇ ಆದ ತರಳನ ತಿರ

ಸ್ಫಾರವು ಅವಳ ಎದೆಯನ್ನು ತಿವಿಯಿತು. ರಾಮನ ಮನಸ್ಸೋ ದುಃಖಾಗ್ನಿಯ ಒಂದು ಕುಂಡವೇ ಆಗಿಬಿಟ್ಟಿತು.

(ಅತಿ ಚಿಂತಾಪರವಶನಾಗಿ, ತನ್ನಷ್ಟಕ್ಕೇ ಉದ್ಗಾರ ತೆಗೆಯುತ್ತ)- ಬಲಮದಾಂಧರೇ...ಬಲವು ದುರ್ಬಲರ ಮೇಲೆ ಛಲವನ್ನು ನಡೆಸುವುದಕ್ಕಾಗಲ್ಲ. ಹಾಗೆ ಮಾಡಿದುದರ ಫಲವು ಸಿಗದೇ ಹೋಗಲಿಕ್ಕಿಲ್ಲ. ತಿಲಮಾತ್ರವೂ ಕಡಿಮೆಯಾಗದೆ ಸಿಕ್ಕಿಯೇ ತೀರುವುದು... ಅಯ್ಯೋ...ನನಗೇನಾಗುವುದೋ? ಇನ್ನೇನಾಗುವುದೋ! ಯಾರು ಗತಿಯೋ!

ಮೋಹನ :—ರಾಯರೇ ಇದೇನು! ಇದರಿಂದಾಗತಕ್ಕ ಲಾಭವೇನು!

ಶಿವ :—(ಎಚ್ಚರನಾಗಿ) ಏನು? ಕ್ಷಮಿಸಿ, ನಿಮ್ಮ ಮಾವನವರು ನನ್ನನ್ನು ಕ್ಷಮಿಸುವರೇ? ಅವರ ಕ್ಷಮೆಯೇ ನನ್ನನ್ನು ಕಾಪಾಡಬೇಕು. ಕರ್ಮದ ಪ್ರತಿಫಲ ಪ್ರವಾಹದ ವೇಗವನ್ನು ತಗ್ಗಿಸುವುದು ಕರ್ಮಪೀಡಿತರ ಕ್ಷಮಾಶೀರ್ವಾದ ಗುಣಗಳೇ ಅಲ್ಲವೆ?

ಮೋಹನ :—ಏನೋ-ಇರಬಹುದು. ವಿಚಾರವೇನೋ ನ್ಯಾಯವೇ, ಆದರೂ ಸಂಪ್ರದಾಯ ಹೇಗಿದೆಯೋ...

ಶಿವ :—ಆಚಾರ್ಯರೇ, ಈಗಲೇ ಶಾಸ್ತ್ರಿಯವರನ್ನು ಕರೆದುಕೊಂಡು ಬನ್ನಿರಿ. ಅವರ ಪಾದಕ್ಕೆ ಬಿದ್ದು...

ಮೋಹನ :—ಅಗೋ...ಅವರೇ ಬರುತ್ತಿದ್ದಾರೆ. ಅವರಿಗೆ ಈ ಸುದಿ ತಿಳಿಯಿತೋ ಏನೋ?

ಶಿವ :—ಈಗೀಕಪ್ಪು ಮೋರೆಯನ್ನು ಅವರಿಗೆ ಹೇಗೆ ತೋರಿಸಲಿ! (ಶಾಸ್ತ್ರಿಯ ಪ್ರವೇಶ. ಶಿವರಾಯನು ಬೇಗನೇ ಹೋಗಿ ಆತನ ಪಾದಕ್ಕೆ ಬೀಳುತ್ತಾನೆ)

ನೀಲ :—ಇದೇನು...ನಿಮ್ಮಂಥವರು...

ಶಿವ :—ಛೀ ಛೀ, ನಾವೆಲ್ಲರೂ ಒಂದೇ. ನಾವೆಲ್ಲರೂ ಒಂದೇ - ಕ್ಷಮಿಸ ಬೇಕು–ಕ್ಷಮಿಸಿದೆ ಎಂದೆನ್ನದೆ ನಾನು ನಿಮ್ಮ ಕಾಲನ್ನು ಬಿಡುವದಿಲ್ಲ.

ನೀಲ :— ಕ್ಷಮಿಸಿದೆ- ಏಳಿ–ಆದರೆ...ಯಾತರ ಕ್ಷಮೆ ? ಅದಾದರೂ ಹೇಳಿ.

(ರಮಾ ರಮೇಶರ ಪ್ರವೇಶ)

ಶಿವ :—ಮಗೂ ! ನಿನಗೆಂತಹ ಕಷ್ಟವನ್ನು ಕೊಟ್ಟೆ (ರಮೆಯು ನಮಸ್ಕರಿಸುತ್ತಾಳೆ) ರಮಾ ನೀನೂ ನನ್ನನ್ನು ಕ್ಷಮಿಸುವೆಯಲ್ಲಾ ?

ರಮಾ :—ನಾವು ನಿಮ್ಮ ಮಕ್ಕಳೇ ಅಲ್ಲವೇ ? ನೀವೇನು ಮಾಡಿದಿರಿ ?

ಶಿವ :—ಮಗೂ, ನಿನ್ನಂತಹ ಗೃಹಲಕ್ಷ್ಮಿಯು ಸಿಕ್ಕಿದಮೇಲೆ ಆ ಬೆಳ್ಳಿ ಬಂಗಾರದ ನಿರ್ಜೀವ ಲಕ್ಷ್ಮಿಯನ್ನು ತೆಕ್ಕೊಂಡೇನು ಮಾಡಲಿ ?

ನೀಲ :—ಇದೇನು ಚಮತ್ಕಾರ ? ರಮೇಶರಾಯರು ಹೇಳಿದಂತೆ ನಿಮ್ಮ ಮನಸ್ಸು ಸಮಾಧಾನವಾಗುವಂತೆ ಏನಾದರೂ ಮಾಡೋಣವೆಂದಿಲ್ಲಿಗೆ ಬಂದೆವು - ಆದರೆ...

ಶಿವ :—ನನ್ನಲ್ಲಾದ ವ್ಯತ್ಯಾಸದಿಂದ ನಿಮಗೆ ಆಶ್ಚರ್ಯವಾಗಬಹುದು. ಈ ತಂತಿ ನೋಡಿ. ಧನೋನ್ಮತ್ತ ವರನ ತಂದೆಗೆ ಬಂದ ಸೊಕ್ಕನ್ನು ಮುರಿಯಲಿಕ್ಕೆ ದೇವರ ಪೆಟ್ಟು !! ಇದೇ ಎಲ್ಲಾ ತಂದೆಯವರಿಗೂ ತಿಳಿದರೆ ಜಗತ್ತಿಗೆ ಎಷ್ಟೊಂದು ಹಿತವಾಗುವುದು ! ಈಗ ಡಾಕ್ಟರ್, ನಾನು ಹೇಗೂ ಇರಲಿ. ನಿಮ್ಮ ಶ್ರೀಮಂತಿಕೆಗೆ ತಕ್ಕ ವಧುವನ್ನು ಎಲ್ಲಿಂದಲಾದರೂ ವರಿಸಿಕೊಂಡು ಸುಖವಾಗಿ ಬಾಳಿ.

ಮೋಹನ :— ಇದೇನು ಮಾತು ? ನಾನು ಶ್ರೀಮಂತನೂ ಅಲ್ಲ. ವರದಕ್ಷಿಣಾಭಿಲಾಷಿಯೂ ಅಲ್ಲ. ಕಾಯಾ ವಾಚಾ ಮನಸಾ ನಾನು ಹಿಂದೂ ಸಮಾಜದ ಈಗಿನ ಕಾಲದ ಕ್ರೂರಾತ್ಮಕ ಸಂಪ್ರದಾಯಗಳ ವೈರಿ. " ಜಗದ್ಧಿತಾಯ ಆತ್ಮನೋ ಮೋಕ್ಷಾಯ " ಇದೇ ನನ್ನ ಮಂತ್ರ. ನನಗೆ ಬೇರೆ ಮಂತ್ರ ತಂತ್ರಗಳೂ ಶಾಸ್ತ್ರಗಳೂ ಇಲ್ಲವೇ

ಇಲ್ಲ. ಸಯುಕ್ತಿಕವಾದ ನೀತಿಯೇ ನನ್ನ ಮಾರ್ಗದರ್ಶಿ. ಅದನ್ನು ನಡೆಸುವುದೇ ನನ್ನ ಧರ್ಮ.

ನಿಮ್ಮ ಹುಡುಗಿಯಲ್ಲಿ ನನಗೆ ತಿರಸ್ಕಾರವೋ? ಮೇಲೆ ದುಡ್ಡಿದ್ದರೆ ಮಾತ್ರ ಅಂಗೀಕಾರವೋ? ಛೆ- ಇದೊಂದು **ನಿಮಗೆ ಬುದ್ಧಿ ಕಲಿಸಲಿಕ್ಕಾಗಿ ಮಾಡಿದ ಕಪಟನಾಟಕ.** ನಿಮ್ಮ ದುಡ್ಡು ಸುರಕ್ಷಿತವಾಗಿಯೇ ಇದೆ. ಈ ತಂತಿಯು ನನ್ನ ಮೋಸ.

ಕುಮುದೆಯೇ ನನ್ನ ಕಣ್ಣಿನ ಗೊಂಬೆ. ನನ್ನ ಹೃದಯದೇವಿ. ನನ್ನ ಜೀವಜೀವಾಳ. ನನ್ನ ಸುಖಸಾಮ್ರಾಜ್ಯದ ರಾಣಿ. ಪರಸ್ಪರ ಪ್ರೇಮದ ಆಶೀರ್ವಾದವೊಂದಿದ್ದರೆ ಸಾಕೀ ವಿವಾಹಕ್ಕೆ. **ಭಾವ ವಿಚಾರಾದರ್ಶಗಳ ಐಕ್ಯವೇ ವಿವಾಹ** ಅದೇ ಅಪಾರ ಸುಖ ತರಂಗ ಪ್ರವಾಹ. ಅದೇ ಲಗ್ನ. ದೇಹವನ್ನು ಮಾತ್ರ ಬರಿಯ ರೂಢಿಗಾಗಿ ಸೇರಿಸುವುದು ಮಾನವಸುಖವಿಕಾಸಗಳಿಗೆ ವಿಘ್ನವೇ ಸರಿ. **ದಾಂಪತ್ಯವೆಂದರೆ ದೇಹಸಾಮೀಪ್ಯ ಮಾತ್ರವಲ್ಲ, ವಧೂವರರ ಪರಸ್ಪರ ವೃತ್ತಿ ಸಾರೂಪ್ಯ.**

ನಿಃಸ್ವಾರ್ಥ ಪ್ರೇಮದಲ್ಲಿಯೇ ಇದೆ ನಿಜವಾದ ಆಚಾರ, ಪ್ರಚಂಡ ಧರ್ಮಪ್ರಚಾರ. ಅದರಲ್ಲಿಯೇ ಧಾರ್ಮಿಕ ಸಂಸಾರ. ಅದಿಲ್ಲದ್ದಲ್ಲಿ ಎಂತಹ ಮಂತ್ರಗಳ ಮದುವೆಯೇ ಆಗಲಿ ಅದು ವ್ಯಭಿಚಾರ ರೂಢ ವ್ಯಭಿಚಾರವೇ ಸರಿ.

(ಕುಮುದೆಗೆ) ತನ್ನಿ, ನಿಮ್ಮ ಕೈತನ್ನಿ (ಎಂದೊಡನೆಯೇ ಉಲ್ಲಾಸದಿಂದ ಶಿವರಾಯನು ಇಬ್ಬರ ಕೈಗಳನ್ನು ಜೋಡಿಸಿಬಿಡುತ್ತಾನೆ. ಎಲ್ಲರೂ ಮೋಹನ ಕುಮುದೆಯರನ್ನು ಆಶೀರ್ವದಿಸುತ್ತಾರೆ.)

**ಸಮಾಪ್ತಿ**

——o——